# ಕೋರ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

**ದಾಸಪ್ಪ ಎನ್.**

ಮಾರ್ಗದರ್ಶಕರು

**ಡಾ. ಎಸ್.ವೈ. ಸೋಮಶೇಖರ್**

ಸಹಾಯಕ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

872

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯- ೧೦

954.87
DAS K.

872A

# ಕೋರ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

**ದಾಸಪ್ಪ ಎನ್.**

R.N. KUAH/D0433

ಮಾರ್ಗದರ್ಶಕರು

**ಡಾ. ಎಸ್.ವೈ. ಸೋಮಶೇಖರ್**

ಸಹಾಯಕ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

954.87

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯- ೧೦

AKSHARA GRANTHALAYA

ACC.NO. 109292

# ಸಂಶೋಧಕರ ಪ್ರಮಾಣ ಪತ್ರ

**"ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು **ಡಾ.ಎಸ್.ವೈ.ಸೋಮಶೇಖರ್** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಾಸಪ್ಪ.ಎನ್.

(ದಾಸಪ್ಪ ಎನ್.)

ಸಂಶೋಧಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ದಿನಾಂಕ : ೧೫-೦೯-೨೦೧೦

ಸ್ಥಳ : ವಿದ್ಯಾರಣ್ಯ.

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ **ದಾಸಪ್ಪ.ಎನ್** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

೧೨/೦೯/೧೦

ದಿನಾಂಕ : ೧೫-೦೯-೨೦೧೦

ಸ್ಥಳ : ವಿದ್ಯಾರಣ್ಯ.

(ಡಾ.ಎಸ್.ವೈ. ಸೋಮಶೇಖರ್)
ಸಹ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕರ್ನಾಟಕದ ನಕ್ಷೆ



# ತುಮಕೂರು ಜಿಲ್ಲೆಯ ನಕ್ಷೆ



# ಕೋರ ಹೋಬಳಿಯ ನಕ್ಷೆ
(ತುಮಕೂರು ತಾಲ್ಲೂಕು)



# ಅಧ್ಯಾಯ – ಒಂದು : ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನಗಳ ಸಮೀಕ್ಷೆ

೧.೪ ಅಧ್ಯಯನ ವಿಧಾನಗಳು

೧.೫ ಅಧ್ಯಯನ ಸ್ವರೂಪ

# ಅಧ್ಯಾಯ – ಒಂದು

## ಪ್ರಸ್ತಾವನೆ

ಇತಿಹಾಸವೆಂಬುದು ಗತಕಾಲದಲ್ಲಿ ನಡೆದ ಘಟನೆಗಳ ದಾಖಲೆ. ಆ ಘಟನೆಗಳ ಕುರಿತ ಹೊಸ ಹೊಸ ಅಧ್ಯಯನಗಳಿಂದಾಗಿ ಒಂದು ಪ್ರದೇಶದ ಇತಿಹಾಸದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲಬಹುದು. ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ರಚಿಸುವಾಗ ಆ ಪ್ರದೇಶದ ಅನ್ವೇಷಣೆ, ಸಂಶೋಧನೆ, ಸಂಗ್ರಹಣೆ, ವಿಷಯ ನಿಷ್ಕರ್ಷ ಮತ್ತು ಪ್ರಕಟಣೆಗಳು ಆ ನಾಡಿನ ಗ್ರಾಮಗಳಿಂದ ಪ್ರಾರಂಭವಾಗಬೇಕು. ಅಲ್ಲಿನ ಭೌಗೋಳಿಕ ಪರಿಸರ ರಾಜಕೀಯ ಆಡಳಿತ, ದೇವಾಲಯ ವಾಸ್ತುಶಿಲ್ಪ, ಮೂರ್ತಿಶಿಲ್ಪ, ವೀರಗಲ್ಲು ಶಾಸನಗಳು ಮತ್ತು ಅಲ್ಲಿನ ಜನಜೀವನ ಕ್ರಮವು ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವವನ್ನು ಪಡೆಯುತ್ತವೆ.

ಭವ್ಯ ಪರಂಪರೆಯ ಇತಿಹಾಸವನ್ನು ಹೊಂದಿರುವ ಕನ್ನಡ ನಾಡನ್ನು ಆಳಿದ ಅರಸು ಮನೆತನಗಳ ಇತಿಹಾಸದ ಬಗ್ಗೆ ಈಗಾಗಲೇ ಹೆಚ್ಚು ಸಂಶೋಧನೆಗಳು ನಡೆದಿವೆ. ಇವು ಕೇವಲ ಐತಿಹಾಸಿಕತೆಯನ್ನು ಬಿಂಬಿಸುವಂತಹ ಇತಿಹಾಸವನ್ನು ಮಾತ್ರ ಕಟ್ಟಿಕೊಡುತ್ತವೆ. ಆದರೆ ಗ್ರಾಮಗಳ ಇತಿಹಾಸ ಅಧ್ಯಯನ ನಡೆದಿಲ್ಲವೆಂದು ಹೇಳಬಹುದು. ಈ ನಿಟ್ಟಿನಲ್ಲಿ ಕೋರಾ ಹೋಬಳಿ ಪರಿಸರವನ್ನು ಗಮನದಲ್ಲಿಟ್ಟುಕೊಂಡು ಅಲ್ಲಿನ ಪುರಾತತ್ವ ಅವಶೇಷಗಳು, ದೇವಾಲಯಗಳು ಮತ್ತು ಶಾಸನಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದ್ದು, ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಸಾಂಸ್ಕೃತಿಕ ಇತಿಹಾಸವನ್ನು ರಚಿಸುವಾಗ ಅಲ್ಲಿನ ಸಾಮ್ರಾಜ್ಯಗಳ ನಿರ್ಮಾಣ ಅವುಗಳ ವ್ಯವಸ್ಥೆ ಧಾರ್ಮಿಕ ದೃಷ್ಟಿ, ಸಾಹಿತ್ಯಕ ಸೃಷ್ಟಿ, ಶಿಲ್ಪ, ಸಂಗೀತ ಇತರ ಎಲ್ಲಾ ರಂಗಗಳಲ್ಲಿಯೂ ಉಂಟಾದ ಬದಲಾವಣೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಹಿಂದೆ ನಡೆದ ವಾಸ್ತವಿಕ ಘಟನೆಗಳ ಸ್ಪಷ್ಟ ನಿರೂಪಣೆ ಇತಿಹಾಸವಾದರೆ ಅಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಜನಜೀವನ ಕ್ರಮದ ಎಲ್ಲಾ ರಂಗಗಳಲ್ಲಿ ಆದ ಪ್ರಗತಿ ಮತ್ತು ವಿಫಲತೆಯನ್ನು ಯಥಾವತ್ತಾಗಿ ನಿರೂಪಿಸುವುದು ಸಾಂಸ್ಕೃತಿಕ ಇತಿಹಾಸ ರಚನೆಯ ಪ್ರಮುಖ ಗುರಿ. ಪುರಾತತ್ವೀಯ ಕುರುಹುಗಳನ್ನು ಆಧರಿಸಿ ಒಂದು ಸೀಮಿತ ಪ್ರದೇಶವನ್ನು ಆಯ್ದುಕೊಂಡು ಅಧ್ಯಯನ ಮಾಡಿದಲ್ಲಿ ಒಂದು ಪ್ರದೇಶದ ಇತಿಹಾಸಕ್ಕೆ ಹೆಚ್ಚು ಮಹತ್ವವನ್ನು ನೀಡಿದಂತಾಗುತ್ತದೆ. ಆಗ ಅದೊಂದು ವಸ್ತುನಿಷ್ಠ ಅಧ್ಯಯನವಾಗುತ್ತದೆ. ಈ ಹಿನ್ನೆಲೆಯಲ್ಲಿ ತುಮಕೂರು ತಾಲ್ಲೂಕಿನ ಕೋರಾ ಹೋಬಳಿ ಪರಿಸರವನ್ನು ಸೀಮಿತವಾಗಿರಿಸಿಕೊಂಡು "ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

## ೧.೧ ಅಧ್ಯಯನದ ಉದ್ದೇಶ

ಯಾವುದೇ ಒಂದು ಅಧ್ಯಯನ ವಿಧಾನದಲ್ಲಿ ಉದ್ದೇಶವು ಪ್ರಮುಖ ಪಾತ್ರವಹಿಸುತದೆ. ಪ್ರಸ್ತುತ ಶೀರ್ಷಿಕೆಯು "ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"ವಾಗಿದೆ, ಇತಿಹಾಸದ ಪುಟಗಳಲ್ಲಿ ಅಜ್ಞಾತವಾಗಿರುವ ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಇತಿಹಾಸವನ್ನು ಪ್ರಸ್ತುತ ಪ್ರೌಢ ಪ್ರಬಂಧದ ಮೂಲಕ ಬೆಳಕಿಗೆ ತರುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಕೊರಾ ಪರಿಸರವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಾತ್ಮಕ ಅಧ್ಯಯನಕ್ಕೆ ಒಳಪಡಿಸುವುದು ಜೊತೆಗೆ ಕ್ಷೇತ್ರಕಾರ್ಯದ ಮೂಲಕ ಪ್ರಾಚೀನ ಅವಶೇಷಗಳನ್ನು ಗುರುತಿಸಿ, ಅವುಗಳನ್ನು ದಾಖಲಿಸುವುದು ಮತ್ತು ಆ ಪ್ರದೇಶದಲ್ಲಿ ನಿರ್ಮಾಣವಾದ ಎಲ್ಲ ಬಗೆಯ ಸ್ಮಾರಕಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮುಖ್ಯ ಉದ್ದೇಶವನ್ನು ಪ್ರಸ್ತುತ ಅಧ್ಯಯನದಾಗಿದೆ. ಈ ಪರಿಸರದಲ್ಲಿ ಗೊತ್ತಿರುವ ಮಾಹಿತಿಗಳನ್ನು ಪುನರ್ ಪರಿಶೀಲಿಸಿ ಹೊಸ ಮಾಹಿತಿಗಳನ್ನು ಸೇರ್ಪಡೆ ಮಾಡುವುದರ ಮೂಲಕ ಇದುವರೆಗೆ ಬೆಳಕಿಗೆ ಬಾರದ ಶಾಸನಗಳ ಪರಿಚಯ ಹಾಗೂ ಅವುಗಳ ವಿಶ್ಲೇಷಣೆ ಮಾಡುವ ಕಾರ್ಯ ಮುಖ್ಯವಾಗಿದೆ. ಪ್ರಸ್ತುತ ಪರಿಸರದ ವಿಭಿನ್ನ ಸಂಪ್ರದಾಯ, ಆಚರಣೆ ಮತ್ತು ನಂಬಿಕೆಗಳ ಸೂಕ್ಷ್ಮ ಚಿತ್ರಣವನ್ನು ಇಲ್ಲಿ ನೀಡುವುದರ ಮೂಲಕ ಈ ಪ್ರದೇಶದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಸಮಗ್ರ ಅಧ್ಯಯನವನ್ನು ಕೈಗೊಳ್ಳಲಾಗುವುದು. ಒಟ್ಟಾರೆ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಕೋರಾ ಹೋಬಳಿ ಪರಿಸರದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ತಿಳಿಸುವುದೂ ಸಂಶೋಧನೆಯ ಉದ್ದೇಶವಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ವಿಷಯದ ಬಗ್ಗೆ ಪರಿಪೂರ್ಣ ವಿಷಯ ನಿಷ್ಕರ್ಷೆಯಾಗಬೇಕಾದರೆ ಅದಕ್ಕೆ ಅದರದೇ ಅಧ್ಯಯನದ ವ್ಯಾಪ್ತಿ ಹೊಂದುವುದು ಅತ್ಯವಶ್ಯಕ. ಒಂದು ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆ ಯಶಸ್ವಿಯಾಗಲು ಇದು ತುಂಬಾ ಸಹಕಾರಿ. ಪ್ರಸ್ತುತ ಕೋರಾ ಹೋಬಳಿ ಪರಿಸರದಲ್ಲಿ ೯೬ ಹಳ್ಳಿಗಳಿದ್ದು, ಅವುಗಳಲ್ಲಿ ಪ್ರಮುಖ ಚಾರಿತ್ರಿಕ ಗ್ರಾಮಗಳ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಯತ್ನಿಸಲಾಗಿದೆ. ಈ ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಸತಿ ತಾಣವಾಗಿದ್ದು, ಇತಿಹಾಸ ಕಾಲದ ಆರಂಭದಿಂದ ವಿಜಯನಗರೋತ್ತರ ಕಾಲದವರೆಗಿನ ಅನೇಕ ಸ್ಮಾರಕಾವಶೇಷಗಳು, ಸಾಂಸ್ಕೃತಿಕ ಸಂಗತಿಗಳು ಇಲ್ಲಿ ದೊರೆಯುತ್ತಿವೆ. ಅವುಗಳ ಮೂಲಕ ಕೋರಾ ಪರಿಸರದ ಸಮಗ್ರ ಚರಿತ್ರೆಯನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

## ೧.೩ ಅಧ್ಯಯನಗಳ ಸಮೀಕ್ಷೆ

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಕೋರಾ ಹೋಬಳಿ ಪರಿಸರಕ್ಕೆ ಸಂಬಂಧಿಸಿದಂತೆ ಪ್ರಾಗಿತಿಹಾಸ, ಇತಿಹಾಸ, ಪುರಾತತ್ವ, ದೇವಾಲಯ, ಮೂರ್ತಿಶಿಲ್ಪ, ವೀರಗಲ್ಲು ಶಾಸನಗಳನ್ನು ಕುರಿತಂತೆ ಕೆಲವು ಕಿರು ಪ್ರಬಂಧಗಳು ಮತ್ತು ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಕಾಣಬಹುದು.

ಸೂರ್ಯನಾಥ ಕಾಮತ್‌ರವರು ಮಂಡಿಸಿರುವ "ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ" ಕೃತಿಯಲ್ಲಿ ಕೋರಾ ಪರಿಸರದ ಕೆಲವು ದೇವಾಲಯಗಳ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ. ಕನ್ನಡ ವಿಷಯ ವಿಶ್ವಕೋಶ ೨೦೦೭ ಪರಿಷ್ಕೃತ ಸಂಪುಟದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಪ್ರದೇಶದ ಬಗ್ಗೆ ಸಂಕ್ಷಿಪ್ತ ವಿವರಣೆಯಿದೆ. ಎಂ.ಎಂ. ಕಲುಬುರ್ಗಿ ಅವರು ಹಿರೇಗುಂಡಗಲ್ಲಿನ ಒಂದು ಶಾಸನವನ್ನು ತಮ್ಮ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ೨೦೦೨ರಲ್ಲಿ ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ "ಜಯಮಂಗಲಿ" ಎಂಬ ಕಿರು ಹೊತ್ತಿಗೆ ಹಾಗೂ ೨೦೦೭ರಲ್ಲಿ ನಡೆದ ಕೋರಾ ಹೋಬಳಿ ಪರಿಸರದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ "ಹೊನ್ನಾರು" ಎಂಬ ನೆನಪಿನ ಸಂಚಿಕೆಯಲ್ಲಿ ಕೆಲವು ಸ್ಥಳಗಳ ಬಗ್ಗೆ ಕಿರು ವೇತನಗಳನ್ನು ಪ್ರಕಟಿಸಲಾಗಿದೆ.

ಬಿ.ಕೆ.ಶಿವತಾರಕ್‌ರವರು "ಕರ್ನಾಟಕ ಪುರಾತತ್ವ ಕುರುಹುಗಳು" ಎಂಬ (ಪಿ.ಹೆಚ್‌ಡಿ ಅಪ್ರಕಟಿತ ಮಹಾಪ್ರಬಂಧದಲ್ಲಿ) ಕೆಲವು ಪ್ರಾಗ್ಇತಿಹಾಸ ಕಾಲದ ನೆಲೆಗಳನ್ನು ಗುರ್ತಿಸಿದ್ದಾರೆ.

ಕೋರಾ ನಾಡಿನ ರಾಜಧಾನಿ 'ತುಮಕೂರು' ಎಂಬ ಶೀರ್ಷಿಕೆಯಲ್ಲಿ ಬಿ. ನಂಜುಂಡಸ್ವಾಮಿಯವರು ಕೋರಾದಲ್ಲಿ ಆಳ್ವಿಕೆ ಮಾಡಿದ ನಾಡಪ್ರಭುಗಳ ಇತಿಹಾಸವನ್ನು ಕುರಿತಂತೆ ಮತ್ತು ಪಂಡಿತನಾಥ ತಾರಕನಾಥರವರ "ಕರ್ನಾಟಕದ ಪುರಾತತ್ವ ಕುರುಹುಗಳು" ಎಂಬ ಮಹಾಪ್ರಬಂಧದಲ್ಲಿ ಕೋರಾ ಹೋಬಳಿ ಪರಿಸರದ ಪ್ರಾಗಿತಿಹಾಸ ಕಾಲದ ಕೆಲವು ಪ್ರದೇಶಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದ್ದಾರೆ.

ಪ್ರಾಗಿತಿಹಾಸ ಕಾಲದ ಪ್ರಮುಖ ಸ್ಥಳವಾದ ಹಿರೇಗುಂಡಗಲ್ಲಿನ ಬಗ್ಗೆ ತುಮಕೂರಿನ ಇತಿಹಾಸ ತಜ್ಞರಾದ ಡಿ.ಎನ್. ಯೋಗೀಶ್ವರಪ್ಪನವರು "ಹೊನ್ನಾರು" ಎಂಬ ಪುಸ್ತಕದಲ್ಲಿ ಕಿರು ಪ್ರಬಂಧವನ್ನು ಪ್ರಕಟಿಸಿದ್ದಾರೆ. ಬಾ.ರಾ.ಗೋಪಾಲ್‌ರವರ "ತುಮಕೂರು ತಾಲ್ಲೂಕಿನ ಪುರಾತತ್ವ ಅಧ್ಯಯನ" ಎಂಬ ಶೀರ್ಷಿಕೆಯಲ್ಲಿ ಕೋರಾ ಪರಿಸರದ ಪುರಾತತ್ವ ಅಧ್ಯಯನಗಳ ಲೇಖನಗಳು ಹೊರಬಂದಿವೆ.

ಕೋರಾ ಪರಿಸರಕ್ಕೆ ಸಂಬಂಧಿಸಿದಂತೆ ಕೆಲವು ಸಂಪಾದಿತ ಕೃತಿಗಳಲ್ಲಿ, ಸ್ಮರಣ ಸಂಚಿಕೆಗಳಲ್ಲಿ, ಸಂಶೋಧನಾ ಬಿಡಿಲೇಖನಗಳು ಪ್ರಕಟಗೊಂಡಿವೆ. ಬಿ.ಎಲ್. ರೈಸ್ ಸಂಪಾದಿ ೧೯೦೩ರಲ್ಲಿ ಸಂಪಾದಿಸಿದ "ಎಫಿಗ್ರಫಿಯಾ ಕರ್ನಾಟಕ- ಸಂಪುಟ ೧೨ರಲ್ಲಿ ಇಲ್ಲಿನ ಶಾಸನಗಳ ಕುರಿತು ಸಂಕ್ಷೇಪ್ತ ವಿವರಣೆ ಇದೆ.

ಮೂರನೇ ಅಧ್ಯಾಯದಲ್ಲಿ ಈ ಪ್ರದೇಶದ ಪ್ರಾಗಿತಿಹಾಸ ಮತ್ತು ಈ ಪರಸರಿದಲ್ಲಿ ಆಳ್ವಿಕೆ ನಡೆಸಿದ ನಾಡಪ್ರಭುಗಳು, ಪಾಳೇಗಾರರು, ಜೊತೆಗೆ ಗಂಗರು, ಚೋಳರು, ನೊಳಂಬರು, ವಿಜಯನಗರ ಅರಸರು, ನಾಡಪ್ರಭುಗಳು ಮತ್ತು ಪಾಳೇಗಾರರ ಬಗ್ಗೆ ಸ್ಥಳೀಯವಾಗಿ ಸಿಗುವ ಮೂಲಾಧಾರಗಳನ್ನು ಬಳಸಿಕೊಂಡು ರಾಜಕೀಯ ಇತಿಹಾಸವನ್ನು ಕಟ್ಟಿಕೊಡಲಾಗಿದೆ.

ನಾಲ್ಕನೇ ಅಧ್ಯಾಯವು ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನದ ಹಿನ್ನಲೆ, ದೇವಾಲಯ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳ ವಿವರಣೆಯಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಗ್ರಂಥಾಧ್ಯಯನ ಹಾಗೂ ಕ್ಷೇತ್ರಕಾರ್ಯದ ಮೂಲಕ ಶಾಸನಗಳು, ವೀರಗಲ್ಲು, ಮಾಸ್ತಿಗಲ್ಲುಗಳ ಸಮಗ್ರ ಚಿತ್ರಣವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಐದನೇ ಅಧ್ಯಾಯದಲ್ಲಿ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಧಾರ್ಮಿಕ, ಸಾಮಾಜಿಕ ಆರ್ಥಿಕ ಜೀವನ ಶೈಲಿಗೆ ಸಂಬಂಧಪಟ್ಟಂತೆ ವಿಷಯ ನಿರೂಪಣೆ ಮಾಡಲಾಗಿದ್ದು ಈ ಪರಿಸರದ ಜಾನಪದ ಜೀವನ ಶೈಲಿಯನ್ನು ಕಟ್ಟಿಕೊಡಲು ಪ್ರಯತ್ನಿಸಿದೆ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆ, ಫಲಿತಗಳು ಅಲ್ಲದೆ ಸ್ವಂತ ನಿರ್ಧಾರಗಳನ್ನು ಪ್ರಕಟಿಸುವ ಪ್ರಯತ್ನವಿದು.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿಗಳು, ಲೇಖನಗಳು, ಶಾಸನ ಸಂಪುಟಗಳು, ಅಪ್ರಕಟಿತ ಸಂಶೋಧನಾ ಪ್ರಬಂಧಗಳು ಮುಂತಾದವುಗಳ ವಿವರವನ್ನು ಗ್ರಂಥಋಣದಲ್ಲಿ ನೀಡಲಾಗಿದೆ. ದೇವಾಲಯಗಳಿಗೆ ಸಂಬಂಧಿಸಿದ ಛಾಯಾಚಿತ್ರಗಳು ವಿವರಣೆಗಳು ಮತ್ತು ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದ್ದು, ಸಮಗ್ರ ಪರಿಸರದ ಒಟ್ಟಾರೆ ಚಿತ್ರಣವನ್ನು ಇಲ್ಲಿ ನೀಡುವ ಪ್ರಯತ್ನ ಎನ್ನಬಹುದು.

# ಅಧ್ಯಾಯ – ಎರಡು : ಭೌಗೋಳಿಕ ಪರಿಸರ

# ಅಧ್ಯಾಯ – ಎರಡು

## ಭೌಗೋಳಿಕ ಪರಿಸರ

ಇತಿಹಾಸದ ಪುಟದಲ್ಲಿ ನಡೆದ ಪ್ರತಿಯೊಂದು ಘಟನೆಯೂ ಅಲ್ಲಿನ ಭೌಗೋಳಿಕ ಪರಿಸರವನು ಅವಲಂಬಿಸಿರಿತ್ತದೆ. ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿ ಭೌಗೋಳಿಕ ಪರಿಸರದ ನೆಲೆಗಟ್ಟಿನಲ್ಲೇ ತನ್ನ ಹುಟ್ಟು ಹಾಗೂ ಅಂತ್ಯವನ್ನು ಕಂಡುಕೊಂಡಿರುತ್ತದೆ. ಮಾನವನು ಹಂತ ಹಂತವಾಗಿ ಬೆಳವಣಿಗೆ ಹೊಂದಿರುವುದಕ್ಕೆ ಭೌಗೋಳಿಕ ಅಂಶಗಳೇ ಪ್ರಮುಖ ಕಾರಣಗಳೆಂದರೆ ತಪ್ಪಾಗಲಾರದು. ಪ್ರಾಚೀನ ಮಾನವನು ಅನಾಗರೀಕತೆಯಿಂದ ನಾಗರೀಕತೆಯೆಡೆಗೆ ಸಾಗಿ ನದಿ ದಂಡೆಗಳ ಮೇಲೆ ತನ್ನ ಜೀವನವನ್ನು ರೂಪಿಸಿಕೊಂಡಿರುವುದನ್ನು ಗಮನಿಸಿದಾಗ ಭೌಗೋಳಿಕ ಅಂಶಗಳ ಪ್ರಾಮುಖ್ಯತೆ ಸ್ಪಷ್ಟವಾಗುತ್ತದೆ. ಭೂಗೋಳಶಾಸ್ತ್ರವೆನ್ನುವ ರಂಗ ಭೂಮಿಯ ಮೇಲೆ ಇತಿಹಾಸದ ನಾಟಕವನ್ನು ಆಡಲಾಗುತ್ತದೆ. "ಇತಿಹಾಸಕ್ಕೆ ಭೂಗೋಳಶಾಸ್ತ್ರ ಮತ್ತು ಕಾಲಗಣನಾಶಾಸ್ತ್ರ ಎರಡು ಕಣ್ಣುಗಳಿದ್ದಂತೆ[೧] ಎಂಬ 'ವೆಲ್ಲಿಂಗ್‌ಟನ್ ಜೋನ್ಸ್'ರವರ ಹೇಳಿಕೆಯನ್ನು ಗಮನಿಸಿದಾಗ ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ವಿಭಿನ್ನತೆಯನ್ನು ತಿಳಿಯಲು ಭೌಗೋಳಿಕ ಅಂಶಗಳು ಎಷ್ಟು ಸಹಕಾರಿ ಎಂಬುದು ವೇದ್ಯವಾಗುತ್ತದೆ.

ಕೋರಾ ಹೋಬಳಿಯು ತುಮಕೂರಿನಿಂದ ೧೮ ಕಿ.ಮೀ. ಉತ್ತರ ದಿಕ್ಕಿನಲ್ಲಿ. ರಾಜಧಾನಿ ಬೆಂಗಳೂರಿಗೆ ಸುಮಾರು ೮೮ ಕಿ.ಮೀ.ಗಳ ಅಂತರದಲ್ಲಿದೆ ಭೌಗೋಳಿಕವಾಗಿ ಇದು ಬಯಲು ಪ್ರದೇಶವಾಗಿದ್ದು, ತುಮಕೂರಿನ ಹೋಬಳಿಗಳಲ್ಲಿ ೨ನೇ ದೊಡ್ಡ ಹೋಬಳಿಯಾಗಿದೆ. ಐತಿಹಾಸಿಕವಾಗಿ ಈ ಪ್ರದೇಶದಲ್ಲಿ ಈ ಪ್ರದೇಶದಲ್ಲಿ ಗಂಗರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ನೊಂಳಬರು, ಚೋಳರು, ಹೊಯ್ಸಳರು, ವಿಜನಗರದ ಅರಸರು ಮತ್ತು ಮುತ್ತಿನ ಮುಮ್ಮಡಿ ಏಳುನಾಡ ಪ್ರಭುಗಳೂ ಆಳ್ವಿಕೆ ಮಾಡಿದ್ದಾರೆ.[೨] ಇವರ ನಂತರ ಮೈಸೂರಿನ ಒಡೆಯರು ಆಳ್ವಿಕೆ ಮಾಡಿ ತಮ್ಮದೇ ಆದ ನಿದರ್ಶನಗಳನ್ನು ಬಿಟ್ಟುಹೋಗಿದ್ದಾರೆ. ತುಮಕೂರು ಜಿಲ್ಲೆಯಿಂದ ಉತ್ತರಕ್ಕಿರುವ ಕೋರಾ ಹೋಬಳಿ ಐತಿಹಾಸಿಕವಾದ ಪ್ರದೇಶ ಈ ಪ್ರದೇಶದ ಜನರ ಜೀವನ ಶೈಲಿ ಮತ್ತು ಅಭಿವೃದ್ಧಿಯ ಪಥ ಹಾಗೂ ಇತಿಹಾಸ ಅಲ್ಲಿನ ಭೌಗೋಳಿಕ ಪರಿಸರ ಹಾಗೂ ನೈಸರ್ಗಿಕ ಸಂಪತ್ತಿನ ಹಿನ್ನಲೆಯಿಂದ ಪ್ರಭಾವಿತವಾಗಿದೆ. ಮಾನವನ ಜೀವನ ರೀತಿ ಉಡುಗೆ, ತೊಡುಗೆ, ಆಹಾರ ವಸತಿ, ಸಂಪ್ರದಾಯ, ನಂಬಿಕೆಗಳೆಲ್ಲವೂ ಈ ಪರಿಸರದ ಕೊಡುಗೆಗಳು. ಇದು ತುಮಕೂರು ಜಿಲ್ಲೆಗೆ ಹತ್ತಿರವಾಗಿದ್ದು ಕೈಗಾರಿಕೆ, ತಂತ್ರಜ್ಞಾನ ಹಾಗೂ ನೈಸರ್ಗಿಕ ಸಂಪತ್ತಿನ ಹಿನ್ನಲೆಯಿಂದ ಪ್ರಭಾವಿತವಾಗಿದೆ. ರಾಷ್ಟ್ರೀಯ ಹೆದ್ದಾರಿ ೪ (ಪೂನಾ–ಬೆಂಗಳೂರು) ಈ ಹೋಬಳಿಯ ಮೂಲಕ ಹಾಗೂ ರಾಷ್ಟ್ರೀಯ ಉಪ ಹೆದ್ದಾರಿ ೩೩ ಹಾದು ಹೋಗಿರುವುದರಿಂದ ಕೋರಾವು ಇತರ ೬ ತಾಲ್ಲೂಕುಗಳ ಸಂಪರ್ಕ ಸೇತುವೆಯಾಗಿದ್ದು ಉತ್ತಮ ಸಾರಿಗೆ ಸೌಲಭ್ಯವನ್ನು ಹೊಂದಿದೆ.

## ೨.೧ ಭೌಗೋಳಿಕ ಪ್ರದೇಶ

ಪ್ರಸ್ತುತ ಕೋರಾ ಹೋಬಳಿಯ ಭೌಗೋಳಿಕ ವಿಸ್ತೀರ್ಣ ೪೪೧೬೯.೧೬ ಎಕರೆಗಳಷ್ಟಾಗಿದೆ.[೩] ಇದು ೧೨ಲಿ೪೫ ರಿಂದ ೧೪ಲಿ೨೪ ಉತ್ತರ ಅಕ್ಷಾಂಶ ಮತ್ತು ೭೬ಲಿ೨೦ ರಿಂದ ೭೭ಲಿ೩೨ ಪೂರ್ವ ರೇಖಾಂಶಗಳ ನಡುವೆ ನೆಲೆಸಿದೆ.[೪] ಈ ಹೋಬಳಿಯು ವಾಯುವ್ಯಕ್ಕೆ ಕಳ್ಳಂಬೆಳ್ಳ ಹೋಬಳಿ (ಶಿರಾ ತಾಲ್ಲೂಕು) ಉತ್ತರಕ್ಕೆ ಚನ್ನರಾಯದುರ್ಗ ಹೋಬಳಿ (ಕೊರಟಗೆರೆ ತಾಲ್ಲೂಕು) ಪೂರ್ವಕ್ಕೆ ಕೋಳಾಲ ಹೋಬಳಿ (ತುಮಕೂರು ತಾಲ್ಲೂಕು) ಆಗ್ನೇಯಕ್ಕೆ ಉರ್ಡಿಗೆರೆ ಹೋಬಳಿ (ತುಮಕೂರು ತಾಲ್ಲೂಕು) ದಕ್ಷಿಣಕ್ಕೆ ಕಸಬಾ ಹೋಬಳಿ (ತುಮಕೂರು ತಾಲ್ಲೂಕು) ಪಶ್ಚಿಮಕ್ಕೆ ಬೆಳ್ಳಾವಿ ಹೋಬಳಿ (ತುಮಕೂರು ತಾಲ್ಲೂಕು) ಹೋಬಳಿಗಳಿವೆ. ಕೋರಾ ಹೋಬಳಿಯಲ್ಲಿ ೯೬ ಹಳ್ಳಿಗಳಿವೆ. ಅವುಗಳೆಂದರೆ ಅಹೋಬಲಅಗ್ರಹಾರ, ಮಸಣೀಪಾಳ್ಯ, ಚಿನಿವಾರನಹಳ್ಳಿ ಅನ್ನದಾನ ಶಾಸ್ತ್ರಿಪಾಳ್ಯ, ಮಲ್ಲಯ್ಯನಹಳ್ಳಿ, ಜಕ್ಕೇನಹಳ್ಳಿ, ಬೆಳಧರ, ಎಂ.ಗೊಲ್ಲಹಳ್ಳಿ, ಹನುಮಂತಗಿರಿ, ಅಮೃತಗಿರಿ, ನರಸೀಪುರ, ಕೆಂಪನದೊಡ್ಡೇರಿ, ಬತ್ಸಂದ್ರ, ಚಿಕ್ಕೋನಹಳ್ಳಿ, ಕಾಟೇನಹಳ್ಳಿ, ಮುರುಡಗಟ್ಟ, ನಾಗೇನಹಳ್ಳಿ, ವಸಂತನರಾಸಪುರ, ಹೊನ್ನೇನಹಳ್ಳಿ, ಕೋರಾ, ಕಟ್ಟಿಗೇನಹಳ್ಳಿ, ಕೋರಾ ಅಮಾನಿಕೆರೆ, ಸಿಂಗ್ರಿಹಳ್ಳಿ, ಬ್ರಹ್ಮಸಂದ್ರ, ಹಿರೇತೊಟ್ಲುಕೆರೆ, ಚಿಕ್ಕತೊಟ್ಲುಕೆರೆ, ಮಾವುಕೆರೆ, ಕರಿಕೆರೆ, ಹಿರೇಗುಂಡಗಲ್, ಚಿಕ್ಕಗುಂಡಗಲ್, ನಿಂಗಾಪುರ, ಬೊಮ್ಮನಹಳ್ಳಿ, ದೇವರಹಳ್ಳಿ, ಹಿರೇಕೊಡತಕಲ್ ಚಿನಗ, ಮುಂತಾದ ಹಳ್ಳಿಗಳಗಿವೆ. ಇದು ಹೊಂದಿರುವ ಒಟ್ಟು ಭೂ ವಿಸ್ತೀರ್ಣದಲ್ಲಿ ೧೦೧೪೮.೯೮ ಎಕರೆ ಖುಷ್ಕಿ ಭೂಮಿ, ೧೨೨೦.೨೭ ಎಕರೆ ತರಿಭೂಮಿಯನ್ನು ಹೊಂದಿದೆ. ೩೨೩೬.೧೨ ಎಕರೆ ಗೋಮಾಳವನ್ನು ಹೊಂದಿದೆ. ೧೯೯೧ರ ಜನಗಣತಿಯಂತೆ ಒಟ್ಟು ೩೮,೮೮೮ ಪುರುಷರ-೨೦,೩೮೧ ಮಹಿಳೆಯರ-೧೮೫೦೭.೫ ಜನಸಂಖ್ಯೆಯನ್ನು ಹೊಂದಿದೆ.[೫]

## ೨.೨ ಭೂಸ್ವರೂಪ

ಈ ಪರಿಸರವು ದಕ್ಷಿಣ ಭಾರತದ ದಖನ್ ಪ್ರಸ್ಥಭೂಮಿಯ ಮೃದು ಶಿಲಾರಚನೆಯ ಭಾಗದಲ್ಲಿದ್ದು ಸ್ಫಟಿಕ ಶಿಲಾರೂಪದ ಬಂಡೆಗಳಿಂದ ಕೂಡಿದ ಪ್ರದೇಶವಾಗಿದೆ. ಈ ಪ್ರದೇಶವು ಅತೀ ಹೆಚ್ಚಿನ ಬೆಟ್ಟ ಗುಡ್ಡಗಳಿಂದ ಕೂಡಿದ್ದು, ಇವುಗಳಿಂದ ಪ್ರಾಕೃತಿಕವಾಗಿ ರಕ್ಷಣೆಯನ್ನು ಹೊಂದಿದಂತಿದೆ. ಪ್ರತಿಯೊಂದು ಹಳ್ಳಿಗಳಿಗೂ ಒಂದೊಂದು ಸಣ್ಣಪುಟ್ಟ ಬೆಟ್ಟಗಳು ರಕ್ಷಣೆ ನೀಡಿವೆ. ಮಿಂಚಕಲ್ ಬೆಟ್ಟ, ಬೊಮ್ಮನಹಳ್ಳಿ ಬೆಟ್ಟ, ಬಸವನ ಬೆಟ್ಟ, ದೊಡ್ಡ ಬೆಟ್ಟ, ಪೀಳ್ ಗುಟ್ಟೆ, ದೇವಾಂಗಿನಿಯರ ಬೆಟ್ಟ, ಕರೆಕಲ್ಲುಬೆಟ್ಟ, ಚಿನಗದ ಬೆಟ್ಟ, ಓಬಳದಾರನ ಗುಡ್ಡ ಮುಂತಾದ ಬೆಟ್ಟಗಳಿಂದ ಆವೃತವಾಗಿದೆ.[೬] ಈ ಪ್ರದೇಶದಲ್ಲಿ ಕೆಂಪು ಮತ್ತು ಕಪ್ಪು ಮಣ್ಣುಗಳಿಗಿರುವ ಸ್ಥಳಗಳಿಂದ ಕೂಡಿದೆ. ಕಪ್ಪು ಮಣ್ಣು ವ್ಯವಸಾಯಕ್ಕೆ ಉತ್ತಮ ಮತ್ತು ಉತ್ಕೃಷ್ಟವಾಗಿದೆ.

## ೨.೩ ವಾಯುಗುಣ ಮತ್ತು ಮಳೆ

ಪ್ರಸ್ತುತ ಪರಿಸರದ ವಾಯುಗುಣವು ಉಷ್ಣವಲಯದ ಮಾನ್ಸೂನ್ ಮಾದರಿಯದ್ದು ಡಿಸೆಂಬರ್‌ನಿಂದ ಫೆಬ್ರವರಿ ತಿಂಗಳವರೆಗೆ ಚಳಿಗಾಲವಿರುತ್ತದೆ. ಈ ಅವಧಿಯಲ್ಲಿ ಗರಿಷ್ಟ ಸರಾಸರಿ ಉಷ್ಣಾಂಶ ೩೦.೯೦ ಡಿಗ್ರಿ ಸೆಂ.ಗ್ರೇಡ್ ಆಗಿರುತ್ತದೆ. ಈ ಋತುಮಾನದಲ್ಲಿ ಈ ಪರಿಸರವು ಭಾರತದ ಆಗ್ನೇಯ ಭಾಗದಲ್ಲಿ ಆವರ್ತ ಮಾರುತಗಳ ಉಂಟಾಗುವ ಚದುರಿದ ಮಳೆಯನ್ನು ಪಡೆಯುತ್ತದೆ. ಡಿಸೆಂಬರ್, ಜನವರಿ ಮತ್ತು ಫೆಬ್ರವರಿ ತಿಂಗಳಲ್ಲಿ ಗಾಳಿಯಲ್ಲಿ ತೇವಾಂಶದ ಮಟ್ಟ ಶೇ. ೬೮ರಷ್ಟಿರುತ್ತದೆ. ಈ ಅವಧಿಯ ಋತುಮಾನವನ್ನು ಚಳಿಗಾಲ ಎಂದು ಕರೆಯುತ್ತಾರೆ.[೭]

ಮಾರ್ಚ್‌ನಿಂದ ಮೇ ತಿಂಗಳವರೆಗೆ ಬಿಸಿ ಹವಾಗುಣವಿರುತ್ತದೆ. ಈ ಅವಧಿಯಲ್ಲಿ ಮಳೆಯು ಒಮ್ಮೊಮ್ಮೆ ಅನಿರೀಕ್ಷಿತವಾಗಿ ಬೀಳುವುದು. ಈ ಅವಧಿಯ ಏಪ್ರಿಲ್ ತಿಂಗಳಲ್ಲಿ ಅತ್ಯಂತ ಹೆಚ್ಚು ಉಷ್ಣಾಂಶವಿದ್ದು ಗರಿಷ್ಟ ೩೫ ಡಿಗ್ರಿಯಿಂದ ೪೦ ಡಿಗ್ರಿಯವರೆಗೆ ಇರುತ್ತದೆ. ಏಪ್ರಿಲ್ ಮತ್ತು ಮೇ ತಿಂಗಳ ಕೊನೆಯ ಅವಧಿಯಲ್ಲಿ ಆಗಾಗ್ಗೆ ಗುಡುಗಿನಿಂದ ಕೂಡಿದ ಪರಿಸರಣ ರೀತಿಯ ಮಳೆಯು ಬೀಳುವುದುಂಟು. ಈ ಕಾಲಾವಧಿಯನ್ನು ಬೇಸಿಗೆ ಕಾಲ ಎಂದು ಕರೆಯಲಾಗುತ್ತದೆ.[೯]

ಜೂನ್‌ನಿಂದ ಆಗಸ್ಟ್ ತಿಂಗಳವರೆಗೆ ಇಲ್ಲಿ ಮಳೆಗಾಲವಿರುತ್ತದೆ. ಪ್ರಸ್ತುತ ಪರಿಸರದ ಸರಾಸರಿ ಮಳೆಯ ಪ್ರಮಾಣ ನಿಗದಿಮಾಡಲು ಮಳೆಯ ಮಾಪನ ಕೇಂದ್ರವಿಲ್ಲದೇ ನಿರ್ಧರಿಸಲು ಸಾಧ್ಯವಾಗಿಲ್ಲ.[೯] ವಾಡಿಕೆಯ ಪ್ರಕಾರ ಮಳೆಯ ಪ್ರಮಾಣ ಸುಮಾರು ೧೭೦ ಮಿ.ಮೀ.[೧೦] ಈ ಪರಿಸರವು ವರ್ಷದ ಒಟ್ಟಾರೆ ಮಳೆಯಲ್ಲಿ ಸುಮಾರು ಶೇ. ೧೫ರಷ್ಟು ಮಳೆಯನ್ನು ಪಡೆದುಕೊಳ್ಳುತ್ತದೆ.[೧೧] ಈ ಋತುಮಾನವನ್ನು ಮಳೆಗಾಲ ಎಂದು ಕರೆಯಲಾಗಿದೆ. ಇಲ್ಲಿನ ವಿವಿಧ ಬಗೆಯ ಆಹಾರ ಬೆಳೆಗಳಲ್ಲಿ ಮುಖ್ಯವಾದವುಗಳೆಂದರೆ ರಾಗಿ, ಜೋಳ, ಕಡಲೆಕಾಯಿ, ತೊಗರಿ, ಅವರೆ, ಅಳಸಂದೆ, ಹುಚ್ಚೆಳ್ಳು ಮತ್ತು ಭತ್ತ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಮುಂಗಾರು ಮತ್ತು ಹಿಂಗಾರು ಬೆಳೆಗಳ ಜೊತೆಗೆ ವಾರ್ಷಿಕ ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಮಾವು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕೆಲವೊಂದು ಪ್ರದೇಶಗಳಲ್ಲಿ ಕ್ಯಾರೆಟ್, ಮೂಲಂಗಿ, ಬೀಟ್‌ರೂಟ್, ಆಲೂಗಡ್ಡೆ, ಗೆಡ್ಡೆಕೋಸು, ಮುಂತಾದ ತರಕಾರಿ ಹಾಗೂ ಸೇವಂತಿಗೆ, ಮಲ್ಲಿಗೆ, ಕಾಕಡ, ಕನಕಾಂಬರ, ಬಟಾನ್ಸ್ ಮುಂತಾದ ಹೂವುಗಳ ತೋಟಗಾರಿಕೆಯ ಕೆಲಸದಲ್ಲಿ ಇಲ್ಲಿನ ಜನಸಮುದಾಯವು ತಮ್ಮನ್ನು ತೊಡಗಿಸಿಕೊಂಡಿದ್ದಾರೆ.[೧೩] ಜೂನ್, ಜುಲೈ ತಿಂಗಳಿನಲ್ಲಿ ಮಳೆ ಬಿದ್ದರೂ ಹವಾಗುಣ ಬಿಸಿಯಾಗಿರುತ್ತದೆ.[೧೨] ಈ ಅವಧಿ ಮಳೆಗಾಲ ಪ್ರಾರಂಭದ ದಿನಗಳಾದ್ದರಿಂದ ಇಲ್ಲಿನ ಅರಣ್ಯ ಹಾಗೂ ಸಸ್ಯರಾಶಿಗಳು ನಿಧಾನವಾಗಿ ಹಸಿರನ್ನು ಪಡೆಯಲಿಕ್ಕೆ ಸಜ್ಜಾಗುತ್ತವೆ. ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳಿನಲ್ಲಿ ಈ ಪರಿಸರದ ಬಹುತೇಕ ಭೂಭಾಗವು ಹಸಿರು ರಾಶಿಯನ್ನುಟ್ಟು ಕಂಗೊಳಿಸುತ್ತದೆ. ಜೊತೆಗೆ ಭೂಮಿಯ ಅಂತರ್ಜಲದ ಮಟ್ಟ ನಿಧಾನವಾಗಿ ಹೆಚ್ಚುತ್ತಾ ಹೋಗುತ್ತದೆ. ಅಕ್ಟೋಬರ್ ಮತ್ತು ನವೆಂಬರ್ ತಿಂಗಳುಗಳಲ್ಲಿ ಮಾರುತಗಳು ಈಶಾನ್ಯ

ದಿಕ್ಕಿನಿಂದ ಬೀಸುವುದರಿಂದ ಹಾಗೂ ಅನಿರೀಕ್ಷಿತವಾಗಿ ಬಂಗಾಳಕೊಲ್ಲಿಯಲ್ಲಿ ಉಂಟಾಗುವ ಆವರ್ತ ಮಾರುತಗಳಿಂದ ಒಮ್ಮೊಮ್ಮೆ ಮಳೆ ಬೀಳುತ್ತದೆ.[೧೩]

## ೨.೪ ಸಸ್ಯಸಂಪತ್ತು ಮತ್ತು ಅರಣ್ಯ

ಪ್ರಸ್ತುತ ಪರಿಸರದ ಸಸ್ಯ ಸಂಪತ್ತುಗಳಲ್ಲಿ ಮತ್ತು ಗಟ್ಟಿಮುಟ್ಟಾದ ಅರಣ್ಯ ಉತ್ಪನ್ನಗಳು ಮತ್ತು ನದಿ ನೀರಿನಂತಹ ಸಂಪನ್ಮೂಲಗಳು ಇರುವುದು ಬಹುಮಟ್ಟಿಗೆ ಕಡಿಮೆಯೇ ಎನ್ನಬಹುದು. ಏಕೆಂದರೆ, ಇದೊಂದು ಸಾಧಾರಣವಾಗಿ ಒಣಭೂಮಿ ಪ್ರದೇಶವಾಗಿದೆ. ಹಳ್ಳಿಗಾಡಿನ ಮಾನವ ನಿರ್ಮಿತ ವಸತಿ ಪ್ರದೇಶಗಳಿಂದ ಕೂಡಿದ ಭೂ ಪ್ರದೇಶವಾಗಿದೆ. ಸಸ್ಯ ಸಂಪತ್ತಿನಲ್ಲಿ ಹೆಚ್ಚು ಮಾನವ ನಿರ್ಮಿತ ಸಸ್ಯಗಳಾಗಿದ್ದು ರಕ್ಷಿತ ಅರಣ್ಯ ಮತ್ತು ಬೆಟ್ಟಗುಡ್ಡಗಳ ಪ್ರದೇಶದಲ್ಲಿ ತೆಳುವಾದ ನೈಸರ್ಗಿಕ ಸಂಪತ್ತನ್ನು ಕಾಣಬಹುದು.[೧೪]

ಕೋರಾ ಪರಿಸರದ ಒಟ್ಟು ಭೌಗೋಳಿಕ ವಿಸ್ತೀರ್ಣ ೪೪೮೧೯.೧೬ ಹೆಕ್ಟೇರುಗಳು. ಇದರಲ್ಲಿ ೮೬೪.೩೯ ಎಕರೆಗಳಷ್ಟುಭೂ ಪ್ರದೇಶ ಅರಣ್ಯದಿಂದ ಕೂಡಿದ್ದು ಇದರ ಪಾಲು ಶೇ. ೨.೨ರಷ್ಟಿದೆ.[೧೫] ಇಲ್ಲಿ ಬಹುತೇಕ ಎಲೆ ಉದುರುವ, ಶುಷ್ಕ ಪ್ರದೇಶದ ಅರಣ್ಯಗಳಿವೆ. ಪ್ರಸ್ತುತ ಪರಿಸರದಲ್ಲಿ ಪ್ರಮುಖವಾಗಿ ಕಂಡುಬರುವ ಅರಣ್ಯ ಪ್ರದೇಶಗಳೆಂದರೆ ಚಿನಗ, ಜಕ್ಕೇನಹಳ್ಳಿ, ದೇವಲಾಪುರ, ಮಾವುಕೆರೆ, ಹಿರೇಗುಂಡಗಲ್, ಚಿಕ್ಕತೊಟ್ಲುಕೆರೆ, ನರಸೀಪುರ, ಜಿ.ಬೊಮ್ಮನಹಳ್ಳಿ, ಅರಿಯಪ್ಪನಹಳ್ಳಿ, ಕೆಸ್ತೂರು, ಕೆಂಪದಾಳಿಹಳ್ಳಿ ಮುಂತಾದವುಗಳಾಗಿವೆ. ಈ ಅರಣ್ಯ ಪ್ರದೇಶದಲ್ಲಿ ನೀಲಗಿರಿ, ಜಾಲಾರಿ, ಕಮರ, ಕಕ್ಕೆ, ಜಗಳಗಂಟಿ, ಬಿಳಿಜಾಲ, ಹೊಂಗೆ, ಬೇವು, ದೇವದಾರಿ, ಪಚ್ಚಾಲಿ, ಮುರುಗಲು, ಬಿಲ್ಲಿ ಮತ್ತು ಬಿದುರು ಮುಂತಾದ ಅಮೂಲ್ಯವಾದ ಮರಗಳು ಕಂಡು ಬರುತ್ತವೆ.[೧೬]

ಈ ಪರಿಸರದಲ್ಲಿ ವಾರ್ಷಿಕವಾಗಿ ತೀರಾ ಕಡಿಮೆ ಮಳೆ ಬೀಳುವುದರಿಂದ ಇಲ್ಲಿನ ಮರಗಿಡಗಳೂ ಬಹುಮಟ್ಟಿಗೆ ಉರುವಲು ಸೌದೆಗೆ ಬಳಸುವ ಮರಗಳಿಂದ ಕೂಡಿವೆ. ಈ ಅರಣ್ಯದಲ್ಲಿನ ಸಸ್ಯಗಳು ಎರಡು ಬಗೆಯ ಒಣಶುಷ್ಕ ಗಿಡಗಂಟೆಗಳಾಗಿವೆ. ಈ ಪರಿಸರದಲ್ಲಿ ವನ್ಯ ಜೀವಿಗಳೂ ಹೆಚ್ಚಾಗಿ ಕಂಡುಬರುವುದಿಲ್ಲ. ಕೆಲವೊಂದು ಪ್ರದೇಶಗಳಲ್ಲಿ ತೋಳ, ಕಾಡುನಾಯಿ, ಕರಡಿ, ಕತ್ತೆಕಿರುಬ, ಮುಂಗಸಿ, ನರಿ, ಮೊಲ, ಮುಂತಾದ ಕಾಡುಪ್ರಾಣಿಗಳನ್ನು ಕಾಣಬಹುದು. ಇನ್ನೂ ಕೆಲವು ಪ್ರದೇಶಗಳಲ್ಲಿ ನವಿಲು, ಗೂಬೆ, ಹದ್ದು, ಕಾಗೆ, ಗಿಳಿ, ಮರಕುಟಿಕ, ಗುಬ್ಬಚ್ಚಿ, ಕಾಗೆ, ಗೀಜಗ, ಪಾರಿವಾಳ, ಕೋಗಿಲೆ ಮುಂತಾದ ಪಕ್ಷಿಗಳು ಕಂಡು ಬರುತ್ತವೆ. ಚೇಳು, ಮಂಡರಗಪ್ಪೆ, ನಾಗರಹಾವು, ಜೇಡ ಮುಂತಾದ ವಿಷಜಂತುಗಳು ಕಂಡುಬರುತ್ತದೆ. ನಾಯಿ, ಮೇಕೆ, ಕುರಿ, ಹಸು ಎತ್ತು, ಎಮ್ಮೆ, ಮುಂತಾದವು ಈ ಭಾಗದ ರೈತಾಪಿ ವರ್ಗದ ಸಾಕು ಪ್ರಾಣಿಗಳಾಗಿವೆ.

## ೨.೫ ಜಲಸಂಪತ್ತು

ಪ್ರಸ್ತುತ ಪರಿಸರವು ಅಷ್ಟಾಗಿ ಉತ್ತಮ ಜಲ ಸಂಪತ್ತನ್ನು ಹೊಂದಿಲ್ಲ. ಇದಕ್ಕೆ ಯಾವುದೇ ಕಾಲುವೆ ಹಾಗೂ ನದಿ ಜಲಾನಯನ ಪ್ರದೇಶಗಳ ಸೌಕರ್ಯವಿಲ್ಲ. ಸಣ್ಣ ಪುಟ್ಟ ಹಳ್ಳಕೊಳ್ಳಗಳೇ ಇದರ ಜಲಸಂಪತ್ತು.[೧೭]

ಈ ಪರಿಸರವು ಒಟ್ಟು ಭೂ ವಿಸ್ತೀರ್ಣದಲ್ಲಿ ೪೪೧೯೬.೧೬ ಎಕರೆಗಳಿದ್ದು[೧೮] ಇದರಲ್ಲಿ ೨೧೮೪.೩೭ರಷ್ಟು ನೀರಾವರಿ ಭೂವಿಸ್ತೀರ್ಣ ಹೊಂದಿದ್ದು ಒಟ್ಟು ೨೭ ಕೆರೆಗಳನ್ನು ಹೊಂದಿದೆ.[೧೯] ಒಟ್ಟು ವಿಸ್ತೀರ್ಣ ೯೮೯.೩೭ ಹೊಂದಿದೆ. ೧೨೩೬ ಕೊಳವೆಭಾವಿಗಳನ್ನು ಹೊಂದಿದೆ, ಕೆಲವೊಂದು ಪ್ರದೇಶಗಳಲ್ಲಿ ಬಾವಿಗಳಿಂದಲೂ ನೀರನ್ನು ಆಶ್ರಯಿಸಿ ವ್ಯವಸಾಯ ಮಾಡುತ್ತಾರೆ. ಸುಮಾರು ೩೭೯ ಬಾವಿಗಳು ಕಂಡುಬರುತ್ತವೆ. ಕುಡಿಯುವ ನೀರಿನ ಕೊಳವೆ ಬಾವಿಗಳು ೨೦೬ ಕಂಡುಬಂದಿದ್ದು ಪರಿಸರದಲ್ಲಿ ೩೦ ಕಿರುನೀರು ಸರಬರಾಜು ಯೋಜನೆಗಳಿಂದ ನೀರಿನ ಸೌಲಭ್ಯವನ್ನು ಕಲ್ಪಿಸಲಾಗಿದೆ.[೨೦] ೩೨೪೦ ಅತೀ ಸಣ್ಣ ರೈತರು ೩೬೨೧ ಸಣ್ಣ ರೈತರು ೭೮೭ ದೊಡ್ಡ ರೈತರು ೧೨೧೧ ಕೃಷಿ ಕಾರ್ಮಿಕರಿದ್ದಾರೆ.[೨೧] ಈ ಪರಿಸರದ ಭಾಗಗಳಲ್ಲಿ ನೀರಾವರಿಗೆ ಕೆರೆ ಮತ್ತು ಕೊಳವೆ ಬಾವಿಗಳೇ ಪ್ರಮುಖ ನೀರಾವರಿ ಮೂಲಗಳಾಗಿವೆ.

## ೨.೫ ಮಣ್ಣು ಮತ್ತು ಮುಖ್ಯ ಬೆಳೆಗಳು

ಕೋರಾ ಪರಿಸರವು ಮೂರು ರೀತಿಯ ಮಣ್ಣುಗಳನ್ನು ಹೊಂದಿದ್ದು, ಅಹೋಬಲ ಅಗ್ರಹಾರ, ಬೆಳಧರ, ಜಕ್ಕೇನಹಳ್ಳಿ, ನರಸೀಪುರ, ಚಿನಗ, ಓಬಳಾಪುರ, ಎಂ.ಆರ್. ಪಾಳ್ಯ ಮುಂತಾದ ಪ್ರದೇಶಗಳಲ್ಲಿ ಕೆಂಪು ಮರಳು ಮಿಶ್ರಿತ ಮಣ್ಣು ಕಂಡುಬಂದರೆ, ಸಿ.ಟಿ. ಕೆರೆ, ರಾಮಗೊಂಡನಹಳ್ಳಿ, ದೇವಲಾಪುರ, ಶಂಭೋನಹಳ್ಳಿ, ನಂದೀಹಳ್ಳಿ ಮುಂತಾದ ಪ್ರದೇಶಗಳಲ್ಲಿ ಕೆಂಪು, ಕಪ್ಪು ಮತ್ತು ಜೇಡಿ ಮಣ್ಣಿನ ಮಣ್ಣು ಕಂಡುಬರುತ್ತದೆ. ಇನ್ನು ಕೆಲವು ಪ್ರದೇಶಗಳಲ್ಲಿ ಕೆಂಪು, ಮರಳು, ಕಪ್ಪು ಮಿಶ್ರಿತ ಮಣ್ಣನ್ನು ಕಾಣಬಹುದು. ಇಲ್ಲಿನ ಬಹುತೇಕ ಜನರು ಜೀವನೋಪಾಯಕ್ಕಾಗಿ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಇಲ್ಲಿನ ಮುಖ್ಯ ಆಹಾರ ಬೆಳೆಗಳೆಂದರೆ, ರಾಗಿ, ಜೋಳ, ಅವರೆ, ಹುರುಳಿ, ಮುಂತಾದ ಬೆಳೆಗಳಾಗಿವೆ. ತೆಂಗು, ಅಡಿಗೆ, ಬಾಳೆ, ತೋಟಗಾರಿಕೆ ಹಾಗೂ ವಾಣಿಜ್ಯ ಬೆಳೆಗಳಾಗಿವೆ. ರೇಷ್ಮೆ ಕೃಷಿಯು ಇತ್ತೀಚಿಗೆ ಪ್ರಮುಖ ವಾಣಿಜ್ಯ ಬೆಳೆಯಾಗಿದೆ. ಈ ಪರಿಸರದ ಎಲ್ಲಾ ಭಾಗಗಳಲ್ಲಿಯೂ ಇಂದು ರೇಷ್ಮೆ ಕೃಷಿಯನ್ನು ಕಾಣಬಹುದು.

## ೨.೬ ಜನಸಂಖ್ಯೆ

ಪರಿಸರದ ಒಟ್ಟು ಭೌಗೋಳಿಕ ವಿಸ್ತೀರ್ಣ ೪೪೧೯೬.೧೬ ಎಕರೆಗಳಾಗಿದ್ದ ಜಿಲ್ಲೆಯ ಒಟ್ಟು ಭೌಗೋಳೀಕ ವಿಸ್ತೀರ್ಣದಲ್ಲಿ ಶೇ. ೧೦.೫ರಷ್ಟನ್ನು ಹೊಂದಿದೆ. ೨೦೦೧ರ ಜನಗಣತೆಯ ಪ್ರಕಾರ ಕೋರಾ ಹೋಬಳಿಯ ಒಟ್ಟು ಜನಸಂಖ್ಯೆ ಸುಮಾರು ೧೨೫೧೦೩. ಇದರಲ್ಲಿ ಪುರುಷರ ಸಂಖ್ಯೆ ೭೦೧೫೧ರಷ್ಟಿದ್ದರೆ ಮಹಿಳೆಯರ ಸಂಖ್ಯೆ ೫೫೫೦೨ರಷ್ಟಿದೆ. ಜಿಲ್ಲೆಯ ಜನಸಂಖ್ಯೆಯಲ್ಲಿ ಜನಸಂಖ್ಯಾ ಬೆಳವಣಿಗೆಯ ದರ ಶೇ೩.೩:ರಷ್ಟಿದೆ. ೨೦೦೧ರ ಜನಗಣತಿಯಂತೆ ಜನಸಾಂದ್ರತೆ ೧೦೬ ಜನರಿದ್ದು ಜಿಲ್ಲೆಯ ಹೋಬಳಿವಾರು ಜನಸಾಂದ್ರತೆಯಲ್ಲಿ ೩ನೇ ಶ್ರೇಣಿಯಲ್ಲಿದೆ.[೨೨]

ಈ ಪ್ರದೇಶದ ಜನರ ಸಾಕ್ಷರತೆಯು ಬಗ್ಗೆ ತಿಳಿಸುವುದಾದರೆ ಒಟ್ಟು ೮೮.೬ ಸಾಕ್ಷರತೆಯ ಪ್ರಮಾಣ ಹೊಂದಿದೆ. ಮಹಿಳಾ ಸಾಕ್ಷರತೆ ಪ್ರಮಾಣ ೫೯.೧ ಮತ್ತು ಪುರುಷರ ಸಾಕ್ಷರತೆ ಪ್ರಮಾಣ ೬೦.೫೨ರಷ್ಟಿದೆ.

ಪುರುಷ ಮತ್ತು ಮಹಿಳೆಯರ ಜನಸಂಖ್ಯೆ ಪ್ರಮಾಣ ೨೦೦೧ರ ಪ್ರಕಾರ ೯೦೪ರಷ್ಟು ಜನರಿರುವುದು ಕಂಡುಬಂದಿದೆ.[೨೩]

ಈ ಪರಿಸರದಲ್ಲಿ ಪ್ರಾಚೀನ ಕಾಲದ ಕೆಲವು ಅವಶೇಷಗಳು ಕಂಡು ಬಂದಿವೆ. ಕಪ್ಪು ಶಿಲೆಯ ನಂದಿ ವಿಗ್ರಹ ದೇವಲಾಪುರದಲ್ಲಿ ಕಂಡುಬಂದಿದೆ. ಚಿಕ್ಕತೊಟ್ಲುಕೆರೆಯ ಅಟವೀಸ್ವಾಮಿ ಮಠವು ವಿದ್ಯಾಕೇಂದ್ರವಾಗಿದ್ದು ಇಲ್ಲಿನ ಮಾವಿನ ಮರದಲ್ಲಿ ವಾರ್ಷಿಕದ ಪ್ರತಿ ದಿನಗಳಲ್ಲಿ ಮಾವಿನ ಕಾಯಿಗಳು ಕಂಡುಬರುವುದು ವಿಶೇಷತೆಯಿಂದ ಕೂಡಿದೆ.

ಈ ಪರಿಸರದ ಎಲ್ಲಾ ಭಾಗಗಳಲ್ಲಿಯೂ ಮಾಸ್ತಿಗಲ್ಲು, ವೀರಗಲ್ಲುಗಳ ಕಂಡು ಬಂದಿದ್ದು ಭೌಗೋಳಿಕವಾಗಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ.

## ಅಡಿ ಟಿಪ್ಪಣಿಗಳು

೧. ವೆಂಕಟರತ್ನ ಮತ್ತು ಬಿ.ಎಂ.ಪದ್ಮ 'ಇತಿಹಾಸ ಸಂಶೋಧನೆ ಮಾರ್ಗ' ಪು.೨೮
೨. ಇತಿಹಾಸ ದರ್ಶನ, ಸಂ.೧೦-೧೯೯೫ ಪು.೨೪೫
೩. ಅಂಕಿ-ಅಂಶ ಲೇಖಾ ಕೃತಿ, ತಾಲ್ಲೂಕು ಪಂಚಾಯಿತಿ ಪು.೩
೪. ಅದೇ, ಪು. ೪
೫. ಅದೇ, ಪು.೮
೬. ಅದೇ, ಪು.೯
೭. ಕವಿತಾ ಕೃಷ್ಣನ್, ಜಯಮಂಗಲಿ, ಸ್ಮರಣ ಸಂಚಿಕೆ ಪು.೮
೮. ಅದೇ, ಪು.೯
೯. ಅದೇ, ಪು.೧೧
೧೦. ಶೆಟ್ಟರ್ ಎಸ್.ಕೆ., ಮೈ ಜಿಯಾಲಜಿಕಲ್ ಡಿಪಾರ್ಟ್‌ಮೆಂಟ್ ರೆಕಾರ್ಡ್ ಪು.೧೮
೧೧. ಅದೇ, ಪು.೧೯
೧೨. ಕವಿತಾ ಕೃಷ್ಣನ್, ಪೋರ್ಮೋಕ್ತ, ಸ್ಮರಣ ಸಂಚಿಕೆ ಪು.೧೭
೧೩. ಅದೇ, ಪು.೧೭
೧೪. ಅಂಕಿ ಅಂಶಗಳ ಲೇಖಾನುಕೃತಿ, ತಾಲ್ಲೂಕು ಪಂಚಾಯಿತಿ, ತುಮಕೂರು ಪು.೧೨
೧೫. ಮೈಸೂರು ಜಿಯೋಲಜಿಕಲ್ ಡಿಪಾರ್ಟ್‌ಮೆಂಟ್ ರೆಕಾರ್ಡ್ VIII ಪು.೨೭.
೧೬. ಅದೇ, ಪು. ೨೭
೧೭. ಅದೇ, ಪು.೨೭
೧೮. ಅದೇ, ಪು.೨೮
೧೯. ತುಮಕೂರು ಜಿಲ್ಲಾ ದರ್ಶನ, ಪು.೮೬
೨೦. ಅದೇ, ಪು.೮೭
೨೧. ಪೋಮೋಕ್ತ ೮೭
೨೨. ತುಮಕೂರು ಜಿಲ್ಲಾ ಅಂಕಿ ಅಂಶಗಳ ನೋಟ ಜಿಲ್ಲಾ ಸಂಖ್ಯಾ ಸಂಗ್ರಾಹಾಧಿಕಾರಿ ಕಛೇರಿ ಪು.೧೦೮
೨೩. ಅದೇ, ಪು.೧೦೯

# ಅಧ್ಯಾಯ – ಮೂರು
# ಪ್ರಾಗಿತಿಹಾಸ ಮತ್ತು ರಾಜಕೀಯ ಹಿನ್ನೆಲೆ

## ೩.೧ ಪ್ರಾಗಿತಿಹಾಸ

ಗತಕಾಲದ ಮಾನವನ ಇತಿಹಾಸವನ್ನು ಅರಿಯದೇ ನಾವು ಹಿಂದಿನ ಹಾಗೂ ಮುಂದಿನ ಚರಿತ್ರೆಯನ್ನು ಅಧ್ಯಯನ ಮಾಡುವುದು ಕಷ್ಟಸಾಧ್ಯ. ಹೀಗೆ ಮಾನವ ಹುಟ್ಟು ಹೇಗೆ ಹಂತ ಹಂತವಾಗಿ ಬೆಳವಣಿಗೆಯನ್ನು ಹೊಂದುತ್ತಾ ಅನಾಗರೀಕ ಜೀವನ ಶೈಲಿಯಿಂದ ನಾಗರೀಕ ಜೀವನ ಶೈಲಿಗೆ ತನ್ನ ಜೀವನವನ್ನು ರೂಢಿಸಿಕೊಂಡ ಎಂಬುದನ್ನು ಅವರು ನೆಲೆಸಿದ ಪ್ರದೇಶಗಳ ಅವಲೋಕನ ಹಾಗೂ ಬಳಸಿದಂತಹ ಉಪಕರಣಗಳ ಅಧ್ಯಯನದಿಂದ ಮಾತ್ರ ತಿಳಿಯಲು ಸಾಧ್ಯ. ಈ ಅಂಶವು ಮಾನವನು ಇತಿಹಾಸದಲ್ಲಿ ಅತ್ಯಂತ ಸುಧೀರ್ಘವಾದುದು.

ಈ ನಿಟ್ಟಿನಲ್ಲಿ ಸ್ವಾತಂತ್ರ್ಯ ಪೂರ್ವ ಕಾಲದಿಂದಲೂ ಭಾರತ ಹಾಗೂ ಕರ್ನಾಟಕದ ಬೇರೆ ಬೇರೆ ಪ್ರಾಗಿತಿಹಾಸ ಸಂಸ್ಕೃತಿಯ ನೆಲೆಗಳನ್ನು ಕುರಿತು ಅನೇಕ ವಿದ್ವಾಂಸರು ಸಂಶೋಧನೆ ಕೈಗೊಂಡು ಹೊಸ ಹೊಸ ವಿಚಾರಗಳನ್ನು ಬೆಳಕಿಗೆ ತಂದು ಪ್ರಕಟಿಸಿದ್ದಾರೆ. ಕ್ರಿ.ಶ. ೧೮೬೩ರಲ್ಲಿ ರಾಬರ್ಟ್ ಬ್ರೂಸ್ ಪೂಟ್‌ರವರು ಪ್ರಪ್ರಥಮವಾಗಿ ಪಲ್ಲಾವರಂದಲ್ಲಿ ಪ್ರಾಚೀನ ಶಿಲಾಯುಗಕ್ಕೆ ಸೇರಿದ ಉಪಕರಣವನ್ನು ಮೊದಲಿಗೆ ಪತ್ತೆ ಹಚ್ಚುವುದರ ಮೂಲಕ ಪ್ರಾಗಿತಿಹಾಸ ಕಾಲದ ಮೇಲೆ ಉಷಾ ಕಿರಣ ಬೀರಿದರು.[೧]

ಮಾನವನು ಬರವಣಿಗೆ ಕಂಡು ಹಿಡಿಯುವುದಕ್ಕಿಂತ ಪೂರ್ವ ಕಾಲ ಪ್ರಾಗಿತಿಹಾಸ ಕಾಲವೆಂದು ಬರವಣಿಗೆ ಕಂಡುಹಿಡಿದ ನಂತರದ ಕಾಲವನ್ನು ಇತಿಹಾಸ ಕಾಲವೆಂದು ಕರೆಯಲಾಗಿದೆ. ಪ್ರಾಗಿತಿಹಾಸ ಕಾಲದ ಇತಿಹಾಸವನ್ನು ಮಾನವನು ಬಳಸಿ ಬಿಟ್ಟು ಹೋದ ಉಪಕರಣಗಳ ಆಧಾರದ ಮೇಲೆ ನಿರ್ಧರಿಸಬೇಕಾಗಿದೆ. ಈ ನಿಟ್ಟಿನಲ್ಲಿ ಇತಿಹಾಸ ಪೂರ್ವ ಕಾಲದ ನಿವೇಶನಗಳನ್ನು ಪತ್ತೆಹಚ್ಚಿ ಆದಿಮಾನವನ ಚರಿತ್ರೆಯನ್ನು ರೂಪಿಸುವಲ್ಲಿ ಪ್ರಾಗಿತಿಹಾಸ ತಜ್ಞರಾದ ಪ್ರಮೋಸ್, ಮಾರ್ಟಿಮರ್ ವ್ಹೀಲರ್, ಆರ್.ವಿ.ಜೋಶಿ, ಅನ್ಸಾರಿ, ಅಲ್ಚಿನ್, ಸಂಪತ್ ಅಯ್ಯಂಗಾರ್, ಹೆಚ್.ಡಿ. ಸಂಕಾಲಿಯ, ಡಿ.ಎಚ್. ಗೋರ್ಡಾನ್, ಜ್ಯೂನರ್, ಬ್ಯಾನರ್ಜಿ, ಎಂ.ಎಚ್. ಕೃಷ್ಣ, ಮೆಡೋಸ್ ಟೇಲರ್, ಪಿಡಿ. ಕೃಷ್ಣಸ್ವಾಮಿ, ಎಂ ಶೇಷಾದ್ರಿ, ಬಿ.ಸುಬ್ಬರಾವ್ ಅ. ಸುಂದರ, ಎಸ್. ನಾಗರಾಜ್. ಕೆ.ಪದ್ದಯ್ಯ ಹಾಗೂ ಇನ್ನೂ ಮುಂತಾದವರು ಮಹತ್ತರ ಪಾತ್ರವನ್ನು ವಹಿಸಿದ್ದಾರೆ.[೨]

ಕೋರಾ ಪರಿಸರವು ಪ್ರಾಗಿತಿಹಾಸ ಕಾಲದ ಪ್ರಮುಖ ನೆಲೆಗಳನ್ನು ಹೊಂದಿದೆ ಈ ಕಾಲದ ಇತಿಹಾಸ ನಿರೂಪಣೆಯಲ್ಲಿ ಅವರು ಬಳಸಿದಂತ ಶಿಲೋಪಕರಣಗಳು ಪ್ರಮುಖ ಆಧಾರಗಳಾಗಿದ್ದು ಅವು ಪ್ರಾಗಿತಿಹಾಸ ಸಂಸ್ಕೃತಿಯ ಹೆಗ್ಗುರುತುಗಳಾಗಿವೆ. ಬೆಟ್ಟುಗುಡ್ಡ ನದಿ ಕಣಿವೆಗಳಲ್ಲಿ ಅಲೆಮಾರಿ ಜೀವನ ನಡೆಸಿದ್ದವನು ನಂತರ ತನ್ನ ರಕ್ಷಣೆ ಅವಶ್ಯಕತೆಗಾಗಿ ವಿವಿಧ ಬಗೆಯ ಕಲ್ಲಿನ ಆಯುಧಗಳನ್ನು ತಯಾರಿಸಿ ಬಳಕೆ ಮುಂದಾದನು. ಶಿಲಾಯುಧಗಳ ಸ್ವರೂಪ, ಗಾತ್ರ, ಮಾದರಿ ಬಳಸಿದ ತಂತ್ರಗಾರಿಕೆ ಹಾಗೂ ಉಪಯುಕ್ತತೆಯನ್ನು ಆಧರಿಸಿ ಪ್ರಾಗಿತಿಹಾಸ ಕಾಲವನ್ನು ಪ್ರಮುಖವಾಗಿ ಐದು ಹಂತಗಳಾಗಿ ವಿಭಾಗಿಸಬಹುದಾಗಿದೆ. ಹಳೇ ಶಿಲಾಯು

(ಪ್ಯಾಲಿಯೋಲಿಥಿಕ್) ಮಧ್ಯ ಶಿಲಾಯುಗ (ಮೆಸೋಲಿಥಿಕ್) ಮತ್ತು ನವಶಿಲಾಯುಗ (ನ್ಯೂಯೋಲಿಥಿಕ್) ಮತ್ತು ತಾಮ್ರ ಶಿಲಾಯುಗ (ಚಾಲ್ಕೋಲಿಥಿಕ್) ಬೃಹತ್ ಶಿಲಾಯುಗ, ಸಂಸ್ಕೃತಿ (ಮೆಗಾಲಿಥಿಕ್) ಎಂದು ವಿಂಗಡಿಸಲಾಗಿದೆ. ಚಿನಗ ಮತ್ತು ಹಿರೇಗುಂಡಗಲ್‌ನಲ್ಲಿ ಬೃಹತ್ ಶಿಲಾಯುಗ ಆಯುಧೋಪಕರಣಗಳು ದೊರೆತಿದ್ದುವೆಂದು ಶಿಲಾಯುಗ ಸಂಸ್ಕೃತಿಯ ಪ್ರಮುಖ ನೆಲೆಯಾಗಿದ್ದವೆಂದು ತಿಳಿದುಬರುತ್ತದೆ.[೩]

ಈ ಪರಿಸರದಲ್ಲಿ ಆದಿ ಶಿಲಾಯುಗದಿಂದಲೇ ಮಾನವನ ಇರುವಿಕೆಯನ್ನು ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ಭೂವಿಜ್ಞಾನಿಗಳು, ಇತಿಹಾಸ ಸಂಶೋಧಕರು ಸಂಶೋಧನೆಯನ್ನು ಕೈಗೊಂಡು ಹೊಸ ಹೊಸ ವಿಚಾರಗಳನ್ನು ಬೆಳಕಿಗೆ ತಂದು ಪ್ರಕಟಿಸಿದ್ದಾರೆ. ಚಿನಗದಲ್ಲಿ ಸೂಕ್ಷ್ಮಶಿಲಾಯುಗದ ನೆಲೆಯನ್ನು ಹಾಗೂ ಬೃಹತ್ ಶಿಲಾಯುಗದ ಗೋರಿಯನ್ನು ಪತ್ತೆಹಚ್ಚಲಾಗಿದೆ.[೪] ಅದೇ ರೀತಿ ಹಿರೇಗುಂಡಗಲ್‌ನಲ್ಲಿ ಸೂಕ್ಷ್ಮ ಶಿಲಾಯುಗದ ಒಚಿದು ನೆಲೆಚಿುನ್ನು ಹಾಗೂ ಬೃಹತ್ ಶಿಲಾಯುಗದ ಒಂದು ನೆಲೆಯನ್ನು ಗುರುತಿಸಲಾಗಿದೆ. ಪ್ರಸ್ತುತ ಪರಿಸರಕ್ಕೆ ಸಂಬಂಧಿಸಿದಂತೆ ಚಿನಿವಾರದ ಹಳ್ಳಿಯಲ್ಲಿ ಬೃಹತ್ ಶಿಲಾಯುಗದ ಒಂದು ಗೋರಿಯನ್ನು ಪತ್ತೆಹಚ್ಚಲಾಗಿದೆ.[೫]

## ಆದಿ ಅಂತ್ಯ ಶಿಲಾಯುಗದ ನೆಲೆಗಳು

ಕೋರಾ ಪರಿಸರದಲ್ಲಿ ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಕೆಲವೊಂದು ಕುರುಹುಗಳು ಕಂಡು ಬಂದಿವೆ. ಆದರೆ ಯಾವುದೇ ರೀತಿಯ ನೆಲೆಗಳು ಕಂಡುಬರುವುದಿಲ್ಲ. ಕರ್ನಾಟಕದಲ್ಲಿ ೧೮ ನೆಲೆಗಳು ದೊರೆತಿದ್ದು,[೬] ವೈವಿಧ್ಯಮಯ ಉಪಕರಣಗಳು ಲಭ್ಯವಾಗಿವೆ. ಇವುಗಳಲ್ಲಿ ಅಪ್ಪಾನಹಳ್ಳಿ ಹಾಗೂ ಮೂಗನಾಯಕನ ಕೋಟೆ ನೆಲೆಗಳಲ್ಲಿ ಹೆಚ್ಚಿನ ಸಂಖ್ಯೆಯ ಉಪಕರಣಗಳು ದೊರೆತಿದ್ದು ಅಲ್ಲಿನ ಜನ ಜೀವನದ ಬಗ್ಗೆ ತಿಳಿಯಲು ಸಹಾಯಕವಾಗಿವೆ. ಈ ಆದಿ ಹಳೇ ಶಿಲಾಯುಗಕ್ಕೆ ಸಂಬಂಧಿಸಿದ ೧೨೧ ಉಪಕರಣಗಳನ್ನು ಸಂಗ್ರಹಿಸಲಾಗಿದ್ದು ಅವುಗಳಿಂದಾಗುವ ಉಪಯೋಗಗಳನ್ನು ಆಧರಿಸಿ ಇವುಗಳನ್ನು ಕೈಗೂಡಲಿ, ಮಚ್ಚುಗತ್ತಿ, ಚೌಕಾಕಾರದ ಉಪಕರಣ, ಅಂಡಾಕೃತಿ ಉಪಕರಣ ನೀಲುಗತ್ತಿ ಮತ್ತು ಅರೆಗತ್ತಿ ಉಪಕರಣಗಳೆಂದು ವರ್ಗೀಕರಿಸಲಾಗಿದೆ.[೭]

## ಮಧ್ಯ ಹಳೆ ಶಿಲಾಯುಗ ಸಂಸ್ಕೃತಿ

ಮಧ್ಯ ಹಳೆ ಶಿಲಾಯುಗ ಸಂಸ್ಕೃತಿಯು ಶಿಲಾ ಯುಗ ಸಂಸ್ಕೃತಿಯ ಮುಂದುವರಿಕೆಯ ಹಂತವಾಗಿ ಕಂಡುಬರುತ್ತದೆ. ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತಲ್ಲಿಯೇ ಈ ಸಂಸ್ಕೃತಿಯ ಅವಶೇಷಗಳು ಕಂಡುಬಂದಿವೆ. ಬಳಸಿರುವ ಶಿಲಾ ಮಾದರಿ ಹಾಗೂ ತಾಂತ್ರಿಕತೆಯಲ್ಲಿ ಬಹಳಷ್ಟು ಭಿನ್ನತೆ ಕಂಡುಬಂದಿವೆ. ಉಪಕರಣಗಳ ತಯಾರಿಕೆಯಲ್ಲಿ ಈ ಕಾಲಮಾನದಲ್ಲಿ ವಿಭಿನ್ನತೆಯನ್ನು ಪ್ರದರ್ಶಿಸಲಾಗಿದೆ ಶಿಲಾಯುಗಗಳ ಪೂರ್ವ ವಿವರಣೆಯಂತೆ ಕ್ವಾರ್ಟ್ಸ್‌ನ ಬಳಕೆಯು ಅತಿ ಹೆಚ್ಚಿದ್ದರೆ ಜಾಸ್ಪರ್‌ನ ಬಳಕೆ ಕಡಿಮೆ ಪ್ರಮಾಣದಲ್ಲಿದೆ.[೮] ಈ ಸಂಸ್ಕೃತಿಯ ಕಾಲಮಾನ ಶಿಲಾಮಾದರಿಗಳ ಜೊತೆಗೆ ಮತ್ತಷ್ಟು ಉಪಜಾತಿಯ ಶಿಲಾ

ಪ್ರಭೇದಗಳನ್ನೊಳಗೊಂಡಂತೆ ಈ ಕಾಲಮಾನದಲ್ಲಿಯೇ ಹೊಸದಾಗಿ ಉಪಯೋಗಕ್ಕೊಳಪಡಿಸಿರುವ ಶಿಲಾ ಪ್ರಭೇದಗಳಿರುವುದು ಕಂಡುಬಂದಿದೆ.

ಮಧ್ಯ ಹಳೆ ಶಿಲಾಯುಗದ ವೈವಿಧ್ಯತೆಯನ್ನು ತಿಳಿಯಲು ಎರಡು ಮುಖ್ಯ ಅಂಶಗಳನ್ನು ಗಮನದಲ್ಲಿಡಬೇಕು. ಒಂದು ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಉಪಕರಣ ಮೊದಲನೆ ಸಾಂಪ್ರದಾಯಿಕ ಉಪಕರಣಗಳ ಮುಂದುವರಿಕೆ ಎರಡನೆಯದು ಮಧ್ಯ ಶಿಲಾಯುಗದ ಕಾಲಮಾನದಲ್ಲಿ ಬಳಕೆಗೆ ಬಂದಂತೆ ಚಕ್ಕೆ ಉಪಕರಣಗಳಾದ ನೀಳಚಕ್ಕೆ, ಮೊನೆ ಬಾಣದ ಮೊನೆ ಹಾಗೂ ಕೊರಗು ಮೊದಲಾದ ಉಪಕರಣಗಳು ಅಪ್ಪಾನಹಳ್ಳಿ ಸುತ್ತಮುತ್ತ ಮೊದಲನೆಯ ಸಾಂಪ್ರದಾಯಿಕ ಉಪಕರಣಗಳು ಕಂಡುಬಂದಿದ್ದ ಕೋರಾ ಪರಿಸರದಲ್ಲಿ ಈ ರೀತಿಯ ಲಕ್ಷಣಗಳುಳ್ಳ ಉಪಕರಣಗಳು ಕಂಡುಬಂದಿಲ್ಲ. ಆದರೂ ಈ ಹಂತದ ಸಂಸ್ಕೃತಿ ಈ ಭಾಗದಲ್ಲಿ ಇತ್ತೆಂದು ಊಹಿಸಲಾಗಿದೆ.[೯]

## ಅಂತ್ಯಹಳೆ ಶಿಲಾಯುಗ ಸಂಸ್ಕೃತಿ

ಅಂತ್ಯ ಹಳೆ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಕರ್ನಾಟಕದಲ್ಲಿ ಶೋಧಿಸಿದ ಕೀರ್ತಿ ಅ. ಸುಂದರರವರಿಗೆ ಸಲ್ಲುತ್ತದೆ.[೧೦] ಅದೇ ರೀತಿ ಇದರ ಅಸ್ತಿತ್ವವನ್ನು ನಿರ್ಧರಿಸಲು ಎಂ.ಶೇಷಾದ್ರಿ, ಆರ್.ಎಸ್. ಪಪ್ಪು ಹಾಗೂ ಹೆಚ್.ಡಿ.ಸಂಕಾಲಿಯವರ ಅಧ್ಯಯನಗಳು ಸಹಕಾರಿಯಾಗಿದೆ.[೧೧] ನಂತರದ ಶೋಧಗಳು ಈ ಸಂಸ್ಕೃತಿಯು ಕರ್ನಾಟಕದಲ್ಲಿ ಒಂದು ಪ್ರಬಲವಾದ ಸಾಂಸ್ಕೃತಿಕ ಹಂತವಾಗಿತ್ತೆಂದು ಪುಷ್ಟೀಕರಿಸುತ್ತವೆ. ಈ ಸಂಸ್ಕೃತಿಗೆ ಸಂಬಂಧಪಟ್ಟಂತೆ ಸುಮಾರು ೫೦ ನೆಲೆಗಳು ಶೋಧವಾಗಿದ್ದು ಹೆಚ್ಚಿನ ನೆಲೆಗಳಿಗೆ ಮೂಕನಾಯಕನ ಕೋಟೆ ಪರಿಸರದಲ್ಲೇ ಕೇಂದ್ರೀಕೃತವಾಗಿವೆ.[೧೨] ಈ ನೆಲೆಗಳಲ್ಲಿ ಸುಮಾರು ಒಟ್ಟು ೬೯೭ ಉಪಕರಣಗಳು ಲಭ್ಯವಾಗಿವೆ.[೧೩] ಒಟ್ಟಿನಲ್ಲಿ ಈ ಉಪಕರಣಗಳ ಅಧ್ಯಯನದಿಂದ ಈ ಸಂಸ್ಕೃತಿಯ ಮುಖ್ಯ ವಿವರಣೆಗಳನ್ನು ತಿಳಿಯುವುದರ ಒಂದು ಸಮೃದ್ಧ ಸಂಸ್ಕೃತಿಯಾಗಿತ್ತೆಂದು ಕಂಡು ಬಂದಿವೆ. ಇಲ್ಲಿ ಅಂತ್ಯ ಹಳೇ ಶಿಲಾಯುಗದ ಸಂಸ್ಕೃತಿಯು ಸುಮಾರು ಕ್ರಿ.ಪೂ. ೨೫,೦೦೦ ರಿಂದ ಕ್ರಿ.ಪೂ. ೧೦೦೦೦ ವರ್ಷಗಳ ಹಿಂದೆ ಇದ್ದಿತೆಂದು ಗುರುತಿಸಲಾಗಿದೆ.೧೪

## ಸೂಕ್ಷ್ಮ ಶಿಲಾಯುಗ ಸಂಸ್ಕೃತಿ

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯು ಅಂತ್ಯ ಹಳೇ ಶಿಲಾಯುಗದ ನಂತರ ಹಾಗೂ ಶಿಲಾಯುಗದ ಮುಂಚಿನ ಸಾಂಸ್ಕೃತಿಕ ಹಂತವಾಯಿತೆಂದು ಸ್ಪಷ್ಟವಾಗಿ ತಿಳಿದುಬಂದಿದೆ. ಕೋರಾ ಪ್ರದೇಶದ ಆಡಳಿತ ಕೇಂದ್ರವಾದ ತುಮಕೂರಿನಲ್ಲಿ ಈ ಸಂಸ್ಕೃತಿಗೆ ಸಂಬಂಧಪಟ್ಟಂತೆ ಮೊದಲು ಕೇವಲ ಮೂರು ನೆಲೆಗಳು ಕಂಡು ಬಂದಿದ್ದು ನಂತರದ ಸಂಶೋಧನೆಯಿಂದ ಈ ಸಂಸ್ಕೃತಿಗೆ ಸಂಬಂಧಪಟ್ಟಂತೆ ೬೬ ನೆಲೆಗಳು ಕಂಡುಬಂದಿದೆ.[೧೫] ಚಿನಗ ಮತ್ತು ಹಿರೇಗುಂಡಗಲ್‌ಗಳು ಕೋರಾ ಪರಿಸರಕ್ಕೆ ಸೇರಿವೆ.

ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯ ಒಟ್ಟು ೧೮೬೩ ಉಪಕರಣಗಳಲ್ಲಿ ಮೊದಲ ಹಂತಕ್ಕೆ ೧೩೩೭ ಎರಡನೇ ಹಂತಕ್ಕೆ ೧೮, ಮೂರನೇ ಹಂತಕ್ಕೆ ೫೦೮ ಸೇರಿವೆ.[೧೬] ಉಪಕರಣ ವೈವಿಧ್ಯತೆಗೆ ಸಂಬಂಧಪಟ್ಟಂತೆ ನೀಳ ಚಕ್ಕೆ ಮಾದರಿ ೮೦೬, ಹೆರೆಚಕ್ಕೆ ಮಾದರಿ ೪೪೬೭, ಮೋನೆ ಮಾದರಿ ೨೬೦, ಬಾಣದ ಮೋನೆ ೮೭, ಕೊರಗ ೫೦, ಕೊರೆಯುಳಿ ೨೪, ಅರ್ಧಚಂದ್ರಾಕೃತಿ ೬೧, ದಬ್ಬಳ ೩೩, ಹಾಗೂ ಮೂಲಶಿಲಾಗಟ್ಟಿ ೪೬೬, ಈ ಉಪಕರಣಗಳ ವೈಜ್ಞಾನಿಕ ಅಧ್ಯಯನವನ್ನನುಸರಿಸಿ ಕಾಲಮಾನದ ಜೀವನ ವಿಧಾನದಲ್ಲಾದ ಮಾರ್ಪಾಡುಗಳನ್ನು ಗುರುತಿಸಬಹುದು.

ಈ ಸಂಸ್ಕೃತಿಯಲ್ಲಿ ಉಪಕರಣಗಳ ರೂಪ ಮತ್ತು ತಾಂತ್ರಿಕತೆಯಲ್ಲಿ ಸಾಕಷ್ಟು ಮಾರ್ಪಾಡುಗಳಾಗಿರುವುದನ್ನು ಕಾಣಬಹುದು. ಈ ಕಾಲಮಾನದಲ್ಲಿ ಸೂಕ್ಷ್ಮ ಅಂಚಿನ ಉಪಕರಣಗಳನ್ನೇ ಹೆಚ್ಚಾಗಿ ರೂಪಿಸಿರುವುದ ಕಂಡು ಬರುತ್ತದೆ.[೧೭] ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯು ಸುಮಾರು ಕ್ರಿ.ಪೂ. ೬೦೦೦-೫೦೦೦ ರಿಂದ ಕ್ರಿ.ಪೂ. ೨೦೦೦-೧೫೦೦ರ ಕಾಲಮಾನದಲ್ಲಿ ಇದ್ದಿರಬೇಕೆಂದು ನಂಬಲಾಗಿದೆ.[೧೮] ಒಟ್ಟಿನಲ್ಲಿ ಈ ಪ್ರದೇಶವು ಪ್ರಾಗಿತಿಹಾಸದ ಒಂದು ಪ್ರಮುಖ ಸಾಂಸ್ಕೃತಿಕ ಹಂತವೆಂದು ಹೇಳಬಹುದು.

## ಬೃಹತ್ ಶಿಲಾಯುಗ ಸಂಸ್ಕೃತಿ

ತಾಮ್ರ ಶಿಲಾಯುಗದ ಮುಂದುವರೆದ ಸಂಸ್ಕೃತಿಯೇ ಬೃಹತ್ ಶಿಲಾಯುಗ ಸಂಸ್ಕೃತಿ. ಈ ಸಂಸ್ಕೃತಿ ಜನರು ಶಿಲೆಯನ್ನು ಬಳಸಿ ವಿವಿಧ ಮಾದರಿಯ ಬೃಹತ್ ಗಾತ್ರದ ಗೋರಿಗಳನ್ನು ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗದ ಸಂಸ್ಕೃತಿ ಎಂದು ಕರೆಯಲಾಗಿದೆ. ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆ ಹಾಗೂ ಗೋರಿಗಳು ತುಮಕೂರಿನ ಎಲ್ಲಾ ತಾಲ್ಲೂಕುಗಳಲ್ಲಿಯೂ ಲಭ್ಯವಾಗಿವೆ. ಇದುವರೆಗೆ ದೊರೆತ ಮಾಹಿತಿಯಿಂದ ಗೋರಿ ಮಾದರಿಗಳ ವರ್ಗೀಕರಣ, ಭೌಗೋಳಿಕ ಹಾಗೂ ಕಾಲಮಾನದ ದೃಷ್ಟಿಯಿಂದ ಈ ಸಂಸ್ಕೃತಿಯ ಉಗಮ ಮತ್ತು ವಿಕಾಸವನ್ನು ತಿಳಿಯಬಹುದು. ಕೋರಾ ಪರಿಸರದ ಚಿನಗ ಮತ್ತು ಹಿರೇಗುಂಡಗಲ್ಲಿನಲ್ಲಿ ನೆಲೆ ಹಾಗೂ ಗೋರಿಗಳು ಲಭ್ಯವಾಗಿವೆ.' ಪ್ರದೇಶದಲ್ಲಿ ಒಟ್ಟು ಐದು ನೆಲೆಗಳು ಕಂಡುಬಂದಿದ್ದು ಇವುಗಳಲ್ಲಿ ೨ ವಸತಿ ನೆಲೆಗಳು ಉಳಿದ ಮೂರು ನೆಲೆಗಳು ಶಿಲಾಗೋರಿ ನೆಲೆಗಳಾಗಿವೆ.[೧೯] ಈ ಗೋರಿಗಳ ನೆಲೆಗಳು ವಿವಿಧ ಮಾದರಿಯಲ್ಲಿವೆ. ಇಲ್ಲಿ ದೊರೆತ ಗೋರಿ ಮಾದರಿಗಳನ್ನು ಕಲ್ಲುಗುಡ್ಡ, ಗುಂಡುಕಲ್ಲಿನ ವೃತ್ತ, ಕಲ್ಲು ಚಪ್ಪಡಿಯ ಕಲ್ಲು ವೃತ್ತ, ಕಲ್ಮನೆ ಹಾಗೂ ನಿಲಸುಗಲ್ಲು ಗೊರಿಗಳೆಂದು ಗುರುತಿಸಲಾಗಿದೆ.[೨೦]

ವಾಸ್ತವ್ಯದ ನೆಲೆಗಳಲ್ಲಿ ಕಪ್ಪು, ಕೆಂಪು ವರ್ಣದ ಪಾತ್ರೆಗಳು ದೊರೆತಿದ್ದು, ಕೆಲವು ನೆಲೆಗಳ ಸಮೀಪದಲ್ಲಿಯೇ ಗೋರಿ ನೆಲೆಗಳಿರುವುದು ಕಂಡುಬಂದಿದೆ.

ಕರ್ನಾಟಕದಲ್ಲಿ ಸುಮಾರು ೩೧೦೦ಕ್ಕೂ ಹೆಚ್ಚು ನೆಲೆಗಳು ದೊರೆತಿದ್ದು ಇವುಗಳನ್ನು ಕುರಿತು ವೈಜ್ಞಾನಿಕವಾಗಿ ಅಧ್ಯಯನ ನಡೆಸಿ ಮಹಾ ಪ್ರಬಂಧಗಳನ್ನು ರಚಿಸಲಾಗಿದೆ.[೨೧] ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಅ

ಸುಂದರರವರ "ದ ಅರ್ಲ ಚೇಂಬರ್ ಟೂಬ್ಸ್ ಆಫ್ ಸೌತ್ ಇಂಡಿಯಾ", ಬಿ.ಕೆ. ಗಂಗಾಧರ ಅವರ ದಿ. ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ" ಜೊತೆಗೆ ಹೆಚ್ಚಿನ ಮಾಹಿತಿಗಾಗಿ ಶಿಲಾ ಗೋರಿಗಳ ಉತ್ಖನನವನ್ನು ಸಹ ಮಾಡಲಾಗಿದೆ. ಉದಾ ಶೇಷಾದ್ರಿ ಎಂ. ೧೯೬೦-ಜಡಿಗೇಹಳ್ಳಿ ಉತ್ಖನನ, ಬ್ರಹ್ಮಗಿರಿಯ ಉತ್ಖನನ, ಮಾರ್ಟಿಮರ್‌ವ್ಹೀಲರ್ ೧೯೪೭ರಲ್ಲಿ ಮಾನ್ವಿ ಉತ್ಖನನ ನಡೆಸಿದ್ದಾರೆ.

೧೮೯೨ರಲ್ಲಿ ಬಿ.ಎಲ್. ರೈಸ್‌ರವರು ಬೆಳ್ಳಿಬಟ್ಟಲಹಳ್ಳಿಯ ಬೃಹತ್ ಶಿಲಾ ಗೋರಿಗಳನ್ನು ಪತ್ತೆ ಹಚ್ಚಿದರು. ಅಸುಂದರ ಮತ್ತು ಸೆಟ್ಟರ್ ಹೆಚ್.ಕೆ.ರವರು ತಿಪಟೂರು ತಾಲ್ಲೂಕಿನ ಕೇರಳಕಟ್ಟೆಯ ವಿ.ಆರ್. ಚೆಲುವರಾಜನ್‌ರವರು ಪಾವಗಡ(ತಾ) ಬೃಹತ್ ಶಿಲಾ ಗೋರಿಗಳನ್ನು ಪತ್ತೆ ಹಚ್ಚಿದ್ದಾರೆ.[೨೨]

ಕೋರಾ ಪ್ರದೇಶದಲ್ಲಿ ಪ್ರಾಗೈತಿಹಾಸ ಸರ್ವೇಕ್ಷಣ ಕಾರ್ಯದಲ್ಲಿ ಹಲವಾರು ಸ್ಮಾರಕಗಳಿರುವ ಸ್ಥಳಗಳಿವೆ. ಶಿರಾ(ತಾ) ಬುಕ್ಕಾಪಟ್ಣ, ಗುಬ್ಬಿ (ತಾ) ಬೆಟ್ಟದಹಳ್ಳಿ, ತಿಪಟೂರು (ತಾ) ಜಕ್ಕನಹಳ್ಳಿ, ಪಾವಗಡ (ತಾ) ವೈ.ಎನ್. ಹೊಸಕೋಟೆ, ನಿಡಗಲ್, ಬೂದಿ ಬೆಟ್ಟ, ಮತ್ತು ಮರಿದಾಸರಹಳ್ಳಿ, ಜೊತೆಗೆ ಕೋರಾ ಪರಿಸರದ ಚಿನಗ ಮತ್ತು ಹಿರೇಗುಂಡಗಲ್ಲು, ಪ್ರದೇಶಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ಪ್ರಮುಖ ನೆಲೆಗಳಾಗಿವೆ.೨೨ ತುಮಕೂರು ಜಿಲ್ಲೆಯ, ತುಮಕೂರು (ತಾ)ನ ಕೋರಾ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮವಾದ ಚಿನಗವು ಬೃಹತ್ ಶಿಲಾ ಸ್ಮಾರಕಗಳನ್ನು ಹೊಂದಿದೆ. ಇವುಗಳನ್ನು ಸ್ಥಳೀಯರು "ಪಾಂಡವರ ಕಲ್ಲು"[೨೩] ಎಂದು ಕರೆಯುತ್ತಾರೆ. ಈ ಸ್ಥಳದ ಕೆಲವೊಂದು ಶಿಲಾ ಸ್ಮಾರಕಗಳನ್ನು ನಿಧಿಗೋಸ್ಕರ ಹಾಳು ಮಾಡಲಾಗಿದೆ. ಈ ಶಿಲಾ ಸ್ಮಾರಕಗಳು ೩-೪ ಅಡಿ ಎತ್ತರವಾಗಿದ್ದು ಕೆಲವು ಶಿಲಾವರ್ತುಲಗಳನ್ನು ಹೊಂದಿವೆ.[೨೪]

ಇಲ್ಲಿ ಎರಡು ಶಿಲಾ ಸ್ಮಾರಕಗಳು ಕಂಡು ಬಂದಿದ್ದು, ಇದೇ ಊರಿನ ಮುಂಭಾಗದಲ್ಲಿ ಸುಮಾರು ೧೫ ಅಡಿಯ ಎರಡು ನೆಡುಗಲ್ಲು ಅಥವಾ ನಿಲುಸುಗಲ್ಲುಗಳನ್ನು ಕಾಣಬಹುದು.

### ಶಿಲಾಸ್ಮಾರಕಗಳ ಐತಿಹ್ಯ

ಈ ಸ್ಮಾರಕಗಳನ್ನು "ಪಾಂಡವರ ಕಲ್ಲು"[೨೫] ಎಂದು ಕರೆಯುತ್ತಾರೆ. ಪಾಂಡವರು ವನವಾಸ ಸಮಯದಲ್ಲಿ ಇಲ್ಲಿರುವ ನೆಡುಗಲ್ಲುಗಳಿಗೆ ತಮ್ಮ ಕುದುರೆಗಳನ್ನು ಕಟ್ಟುತ್ತಿದ್ದರೆಂದು ಅವರ ಅಜ್ಞಾತ ಸ್ಥಳವೇ ಈ ಶಿಲಾ ಸ್ಮಾರಕಗಳೆಂದು ಹೇಳುತ್ತಾರೆ. ಅದೇ ರೀತಿ ಇಲ್ಲಿ ನಿಲ್ಲಿಸಿರುವ ಎರಡು ನೆಡುಗಲ್ಲುಗಳಲ್ಲಿ ಒಂದು ಕಲ್ಲಿನ ಮೇಲ್ಭಾಗವು ಕತ್ತಿ ತುದಿ ಬಾಗಿದ್ದು, ಕತ್ತಿಯ ರೀತಿಯಲ್ಲಿಯೇ ಚೂಪಾಗಿ ಇರುವುದರಿಂದ ಈ ಗ್ರಾಮಕ್ಕೆ "ಚಿನಗ" ಎಂದು ಕರೆಯುತ್ತಾರೆಂದು ತಿಳಿದುಬಂದಿದೆ.

## ಕೋರಾ ಪರಿಸರದ ಪ್ರಾಗಿತಿಹಾಸ ಕಾಲದ ನೆಲೆಗಳು

| ಕ್ರ ಸಂ. | ಗ್ರಾಮ | ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭ |
|---|---|---|---|---|---|---|---|
| | | | | | ನೆಲೆ | ಗೋರಿ | |
| ೧ | ಚಿನಗ | | ✓ | | ✓ | ✓ | |
| ೨ | ಹಿರೇಗುಂಡಗಲ್ | | ✓ | | ✓ | | |
| | | | | | | | |
| | | | | | | | |

### ಚಿನಗ

ಈ ಪ್ರದೇಶವು ತುಮಕೂರು ತಾಲ್ಲೂಕಿನಿಂದ ಉತ್ತರಕ್ಕೆ ಕೋರಾ ಪರಿಸರದ ಪೂರ್ವಕ್ಕೆ ಇರುವ ಒಂದು ಚಿಕ್ಕ ಗ್ರಾಮ ಪ್ರದೇಶ. ಇಲ್ಲಿ ಸುಮಾರು ೬೦-೬೫ ಮನೆಗಳಿವೆ. ಇದು ಒಂದು ಪುರಾತನ ಪ್ರಾಗಿತಿಹಾಸ ಕಾಲದ ಪ್ರದೇಶವಾಗಿದೆ. ಇಲ್ಲಿ ಸೂಕ್ಷ್ಮ ಶಿಲಾಯುಗದ ಹಲವಾರು ಉಪಕರಣಗಳು ಲಭ್ಯವಾಗಿವೆ. ಈ ಚಿನಗ ಪರಿಸರದಲ್ಲಿ ಹಲವಾರು ವೀರಗಲ್ಲು ಮತ್ತು ಮಾಸ್ತಿಗಲ್ಲುಗಳಿಗಿದ್ದು ಪ್ರಾಚೀನತೆಯ ವೈಶಿಷ್ಟ್ಯತೆಯನ್ನು ಕಾಯ್ದುಕೊಂಡಿದೆ. ಚಿನಗದ ಸುತ್ತಲೂ ಬೆಟ್ಟಗಳಿಂದ ಆವೃತವಾಗಿರುವ ಪ್ರದೇಶವಾಗಿದ್ದು ಇಲ್ಲಿನ ಲಕ್ಷ್ಮೀರಂಗನಾಥ ದೇವಾಲಯ ಹಾಗೂ ಆಂಜನೇಯ ದೇವಾಲಯ ಐತಿಹಾಸಿಕ ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ. ಇಲ್ಲಿ ಸೂಕ್ಷ್ಮ ಕೆತ್ತನೆಯ ಹಲವಾರು ಉಪಕರಣಗಳು ಲಭ್ಯವಾಗಿವೆ. ಜೊತೆಗೆ ಈ ಕಾಲಕ್ಕೆ ಸಂಬಂಧಪಟ್ಟಂತೆ ಶಿಲಾ ಗೋರಿಗಳು ಲಭ್ಯವಾಗಿವೆ. ಈ ಪ್ರದೇಶದಲ್ಲಿರುವ ಊರಿನ ಮುಂಭಾಗದಲ್ಲಿರುವ ಎರಡು ಬೃಹತ್ ನಿಲುವುಗಲ್ಲುಗಳು ಪ್ರಾಗಿತಿಹಾಸ ಕಾಲದ ಪ್ರತಿಬಿಂಬಗಳಾಗಿವೆ.

### ಹಿರೇಗುಂಡಗಲ್

ಮಡಿದವರ ಮನೆ ಎಂದೇ ಹೆಸರಾದ ಈ ಗ್ರಾಮವು ತುಮಕೂರು ನಗರದಿಂದ ೧೩ ಕಿ.ಮೀ. ಹಾಗೂ ಕೋರಾ ಪರಿಸರದಿಂದ ೬ ಕಿ.ಮೀ. ದೂರದಲ್ಲಿ ಉತ್ತರಕ್ಕಿರುವ ಒಂದು ಪುಟ್ಟ ಗ್ರಾಮವಾಗಿದೆ. ಇದು ಕೋರಾ ಪರಿಸರದಲ್ಲಿಯೇ ಅತ್ಯಂತ ಪುರಾತನ ಇತಿಹಾಸವನ್ನು ಮತ್ತು ಪುರಾತನ ಸಂಸ್ಕೃತಿಯನ್ನು ಹೊಂದಿರುವ ಸ್ಥಳವಾಗಿದ್ದು ಇಲ್ಲಿನ ಸಂಸ್ಕೃತಿ ಶಿಲಾಯುಗದ ಕಾಲದಿಂದ ಆರಂಭವಾಗಿದ್ದು ಇಲ್ಲಿ ನೀಳಚಕ್ಕೆ, ಮೊನೆ, ಹೆರೆಚಕ್ಕೆ ಮತ್ತು ಕೊರೆಯುಳಿ ಮುಂತಾದ ಉಪಕರಣಗಳು ದೊರೆತಿವೆ. ಇವು ಸೂಕ್ಷ್ಮ ಶಿಲಾಯುಗದ ಕಾಲಕ್ಕೆ ಸೇರಿದ್ದು, ಬೆಣಚು ಕಲ್ಲಿನಲ್ಲಿ ತಯಾರು ಮಾಡಲಾಗಿದೆ.[೨೫] ಊರಿನ ಸಮೀಪದಲ್ಲೇ ಬೃಹತ್ ಶಿಲಾಯುಗ ಕಾಲದ ಕಪ್ಪು ಕೆಂಪು ವರ್ಣದ ಮಡಿಕೆ ಚೂರುಗಳು ದೊರೆತಿವೆ. ಇಂತಹ ಪುರಾತನ ವಸ್ತುಗಳ ಸಂಶೋಧನೆಯ ಆಧಾರದಿಂದ ಈ ಪ್ರದೇಶವು ಎರಡು ಸಾವಿರದ ಐದು ನೂರು ವರ್ಷಗಳಿಗಿಂತ ಪೂರ್ವದಲ್ಲಿಯೇ ಅತ್ಯಂತ ಪುರಾತನ ಸಂಸ್ಕೃತಿ ಇತ್ತೆಂದು ಹೇಳಬಹುದು.

ಇದು ಕ್ರಿ.ಶ. ೭೭ರಿಂದ ಮಾನವನ ಇರುವಿಕೆಯ ಬಗ್ಗೆ ಗೋಚರಿಸಿದ್ದ ಅಚಿದು ಕೇವಲ ಈ ಊರನ್ನು "ಗುಂಡಿಗಲ್" ಎಂದು ಕರೆಯಲಾಗುತ್ತಿತ್ತು. ಆದರೆ ಈ ಊರಿಗೆ ಹಿರಿಯ ಗುಂಡಗಲ್ ಎಂಬುದನ್ನು ಕ್ರಿ.ಶ.

೧೩೨೩ರಲ್ಲಿ ಹಿರಿಯ ಗುಂಡಿಗಲ್ ಎಂಬುದಾಗಿ ಪರಿವರ್ತಿತವಾಯಿತು[೨೬] ಎನ್ನಬಹುದು[೨೭] ಕಾರಣ ಆ ಗ್ರಾಮದ ಬಳಿ ಒಂದು ದೊಡ್ಡ ಕಲ್ಲಿನ ಗುಡ್ಡವಿದ್ದು ಅದು ನೋಡಲು ಬಸವ ಮಲಗಿರುವ ರೀತಿಯಲ್ಲಿ ಕಾಣುತ್ತಿದೆ. ಅದರಿಂದಲೇ ಈ ಹೆಸರು ಬಂದಿರಬಹುದೆಂದು ನಂಬಲಾಗಿದೆ. ಇಂತಹ ಗ್ರಾಮದಲ್ಲಿ ೧೮ ವೀರಗಲ್ಲುಗಳು ಒಂದೇ ಸ್ಥಳದಲ್ಲಿ ದೊರೆತಿರುವುದು ವಿಶೇಷತೆಯಿಂದ ಕೂಡಿದೆ.

**ಶಿಲಾ ಸ್ಮಾರಕಗಳ ಮಾದರಿ**

ಇಲ್ಲಿ ದೊರೆತಿರುವ ಶಿಲಾ ಸ್ಮಾರಕಗಳ ಆಧಾರದ ಮೇಲೆ ಇಲ್ಲಿನ ಸ್ಮಾರಕಗಳ ಮಾದರಿಯನ್ನು ಪ್ರಮುಖವಾಗಿ ನಾಲ್ಕು ಮಾದರಿಗಳಾಗಿ ವಿಂಗಡಿಸಬಹುದಾಗಿದೆ.[೨೮]

* ನೆಡುಗಲ್ಲು ಅಥವಾ ನಿಲುಸುಗಲ್ಲು
* ಸ್ವಸ್ತಿಕ ಮಾದರಿಯ ಶಿಲಾ ತೊಟ್ಟಿಗಳು
* ಕಲ್ಲು ಚಪ್ಪಡಿಗಳಿಂದ ನಿರ್ಮಿತವಾದ ಶಿಲಾ ತೊಟ್ಟಿಗಳು
* ಕಂಡಿಕೋಣಗಳು

೧. **ನೆಡುಗಲ್ಲು ಅಥವಾ ನಿಲುಸುಗಲ್ಲು:** ಇದು ಶಿಲಾ ಸ್ಮಾರಕದ ಒಂದು ಮಾದರಿಯಾಗಿದೆ. ಇದು ಯಾವುದೇ ಒಂದು ನೆನಪಿನ ಕಲ್ಲು, ಇಂತಹ ಕಲ್ಲನ್ನು "ನೆಡುಕಲ್ಲು" ಎಂದು ಕರೆಯುತ್ತಾರೆ. ಇವುಗಳನ್ನು ನಿರ್ಮಿಸಲು ಕಗ್ಗಲ್ಲು ಅಥವಾ ಕಲ್ಲಿನ ಗುಂಡನ್ನೇ ನೇರವಾಗಿ ಬಳಸಲಾಗಿದೆ. ಇಂತಹ ಶಿಲಾ ಸ್ಮಾರಕಗಳು ಚಿನಗದಲ್ಲಿ ದೊರೆತ್ತಿದ್ದು ಈ ಸುಮಾರು ೧೨-೧೩ ಅಡಿ ಎತ್ತರವಾಗಿವೆ. ಈ ನೆಡುಗಲ್ಲಿನ ಬುಡದಲ್ಲಿ ಒಂದು ಶಿಲಾ ಗೋರಿಯಿದ್ದು ಅಲ್ಲೆ ಶಿಲಾ ವರ್ತುಲವೂ ಇದೆ. ಈ ನೆಡುಗಲ್ಲು ನೇರವಾಗಿದ್ದು ಮೇಲ್ಭಾಗ ಓರೆಯಾಗಿದೆ ಮತ್ತು ತುದಿಯ ಭಾಗ ಅರ್ಧ ವೃತ್ತಾಕಾರವಾಗಿದೆ.

೨. **ಸ್ವಸ್ತಿಕ ಮಾದರಿಯ ಶಿಲಾ ತೊಟ್ಟಿಗಳು:** ನಾಲ್ಕು ಕಲ್ಲುಗಳು ಒಂದಕ್ಕೊಂದು ಹೊಂದಿಕೊಂಡಂತೆ ಜೋಡಿಸಲಾಗಿದೆ. ಇದೇ ರೀತಿಯ ಶಿಲಾ ಗೋರಿಗಳು ಬ್ರಹ್ಮಗಿರಿಯ ಉತ್ಖನನದಲ್ಲಿ ದೊರೆತಿವೆ.೩೨

೩. **ಕಲ್ಲು ಚಪ್ಪಡಿಗಳಿಂದ ನಿರ್ಮಿತವಾದ ಶಿಲಾ ತೊಟ್ಟಿಗಳು:** ತೆಳುವಾದ ಕಲ್ಲುಚಪ್ಪಡಿಗಳನ್ನು ಪೆಟ್ಟಿಗೆಯಾಕಾರದ ಕೊಂಡಿಯಂತೆ ಜೋಡಿಸಿ ಶಿಲಾ ಸ್ಮಾರಕಗಳನ್ನು ಗುರ್ತಿಸಿರುವುದು ಕಂಡುಬರುತ್ತವೆ. ಇವು ಬಹಳ ನಾಜೂಕಾಗಿದ್ದು ಈ ಮಾದರಿಯ ಗೋರಿಗಳು ಬ್ರಹ್ಮಗಿರಿಯಲ್ಲಿ ಕಂಡುಬಂದಿವೆ.

೪. **ಕಂಡಿಕೋಣೆಗಳು:** ನಾಲ್ಕು ಕಡೆ ಕಲ್ಲುಗಳಿಂದ ಕಟ್ಟಿ, ಒಂದು ಕಡೆ ಕಂಡಿ ಹೊಂದಿರುತ್ತದೆ. ಇದರ ವ್ಯಾಸವು ೧೫-೩೦ ಸೆಂ.ಮಿ. ಇದೆ.

ಒಟ್ಟಿನಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಸ್ಮಾರಕಗಳು ಈ ಸ್ಥಳದಲ್ಲಿ ದೊರೆತಿದ್ದು ಇನ್ನೂ ವೈಜ್ಞಾನಿಕ ಅನ್ವೇಷಣೆ ಮತ್ತು ಉತ್ಖನನದಿಂದ ಈ ಸಂಸ್ಕೃತಿಯ ಮೇಲೆ ಸಾಕಷ್ಟು ಬೆಳಕು ಚೆಲ್ಲಬಹುದು.

ಈ ಪ್ರದೇಶದಲ್ಲಿ ಶಿಲಾ ಗೋರಿಗಳನ್ನು "ಮೋರಿಯರ ಗುಡಿ", ಮೋರಿಯರ ಮನೆ, ದೇವರ ಗುಡಿ,೩೭ ಮುನಿಯಪ್ಪನ ಗುಡಿ ಎಂದು ವಿವಿಧ ರೀತಿಯ ಹೆಸರುಗಳಲ್ಲಿ ಕರೆಯುತ್ತಾರೆ. ಹಾಗಾಗಿ ಇವು ಒಂದು ಜನವರ್ಗವನ್ನು ಉದ್ದೇಶಿಸಿ ಹೇಳಿರಬೇಕೆಂಬ ಅಂಶ ತಿಳಿಯುತ್ತದೆ. ವಿಶಿಷ್ಟ ಸಾಂಸ್ಕೃತಿಕ ಹಂತ ಈ ಪ್ರದೇಶದಲ್ಲಿಯೂ ಇದ್ದು ಈ ಸಂಸ್ಕೃತಿಯ ಕಾಲಮಾನವನ್ನು ಕ್ರಿ.ಪೂ. ೧೨೦೦ ರಿಂದ ೨೫೧ ಎಂದು ನಿರ್ಧರಿಸಲಾಗಿದೆ.

ಇಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಪಟ್ಟಂತೆ ಕಲ್ಲಿನ ಅಯುಧಗಳು ಲಭ್ಯವಾಗಿದ್ದು ಬೃಹತ್ ಶಿಲಾಯುಗದ ವಾಸಸ್ಥಾನದ ನೆಲೆಯು ಲಭ್ಯವಾಗಿರುವುದನ್ನು ಗುರುತಿಸಲಾಗಿದೆ. ಒಟ್ಟಿನಲ್ಲಿ ಈ ನೆಲೆಯು ಪ್ರಾಚೀನ ಪ್ರಾಗಿತಿಹಾಸಕಾಲಕ್ಕೆ ಸಂಬಂಧಿಸಿದ ಪ್ರಮುಖ ನೆಲೆಯಾಗಿತ್ತು ಎಂಬುದರಲ್ಲಿ ಸಂಶಯವಿಲ್ಲ.

ವಿಜಯನಗರ ಕಾಲದಲ್ಲಿ ಸಂಗಮವಂಶದ ದೊರೆಯಾದ ಎರಡನೇ ಹರಿಹರನು ಕ್ರಿ.ಶ.೧೩೯೫–೯೬ ರಲ್ಲಿ 'ಚಿನಗ' ಎಂಬ ಗ್ರಾಮವನ್ನು ದಾನ ಮಾಡಿರುವುದರ ಬಗ್ಗೆ ಇಲ್ಲಿ ದೊರೆತಿರುವ ಕನ್ನಡ ಶಾಸನದಿಂದ ನಮಗೆ ತಿಳಿದು ಬರುತ್ತದೆ.

## ೩.೨ ರಾಜಕೀಯ ಹಿನ್ನಲೆ

ಪ್ರಸ್ತುತ ಅಧ್ಯಯನದ ರಾಜಕೀಯ ಇತಿಹಾಸವನ್ನು ತಿಳಿಯುವುದಕ್ಕಿಂತ ಮುಂಚೆ ಕೋರಾ ಪದದ ಅರ್ಥ ತಿಳಿಯುವುದು ಸೂಕ್ತವಾಗಿದೆ. ಕೋರಾ ಎಂಬ ಪ್ರದೇಶವು ಪಾಳೆಗಾರರ, ನಾಡಪ್ರಭುಗಳ ಅಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವಾಗಿತ್ತು. ಕೋರಾ ಎಂಬ ಪದ ಅರ್ಥವನ್ನು ಬಿಡಿಸಿದಾಗ – ಮಡಿಮಾಡಿದ ಖಾಲಿಯಾದ[೨೯] ಎಂಬ ಅರ್ಥವು ನಮಗೆ ತಿಳಿದುಬರುತ್ತದೆ. ನಾಡಪ್ರಭುಗಳು ಆಳ್ವಿಕೆಯಿಂದ ಬೇರೆ ಕಡೆಗೆ ತಮ್ಮ ವಾಸಸ್ಥಳವನ್ನು ಬದಲಾಯಿಸಿದ್ದರಿಂದಾಗಿ ಆ ಪ್ರದೇಶಕ್ಕೆ 'ಕೋರಾ' ಎಂಬ ಹೆಸರು ಬಂದಿರಬಹುದೆಂದು ಇತಿಹಾಸ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

### ತಲಕಾಡಿನ ಗಂಗರು

ಈ ಪರಿಸರದಲ್ಲಿ ಆಡಳಿತವನ್ನು ನಡೆಸಿದ ಮೊದಲ ಅರಸರೆಂದರೆ ತಲಕಾಡಿನ ಗಂಗರು. ಇವರ ಕಾಲಾವಧಿ ಕ್ರಿ.ಶ. ೨೫೦–೯೯೯ ಎಂದು ನಿರ್ಧರಿಸಲಾಗಿದೆ. ಕರ್ನಾಟಕದ ಕಾವೇರಿ ನದಿಯ ಭಾಗಗಳನ್ನೊಳಗೊಂಡ ಆಗ್ನೇಯ ಪ್ರದೇಶದಲ್ಲಿ ಪ್ರಥಮ ಸ್ವತಂತ್ರ ರಾಜ್ಯವನ್ನು ಕಟ್ಟಿದ ಕೀರ್ತಿ ಇವರದು. ಸುಮಾರು ೭೦೦ ವರ್ಷಗಳ ಕಾಲ ಸ್ವತಂತ್ರವಾಗಿ ರಾಜ್ಯವಾಳಿ ಕೋಲಾರ, ತಲಕಾಡು ಮತ್ತು

ಮಾಕುಂದಗಳನ್ನು ತಮ್ಮ ರಾಜಧಾನಿಗಳನ್ನಾಗಿ ಮಾಡಿಕೊಂಡಿದ್ದರು. ಈ ವಂಶದ ಸ್ಥಾಪಕ ದಡಿಗ ಕೊಂಗಣಿವರ್ಮ (ಕ್ರಿ.ಶ. ೩೫೦-೪೦೦) ದುರ್ವಿನೀತ (ಕ್ರಿ.ಶ. ೫೪೦-೬೦೦) ಅತ್ಯಂತ ಪ್ರಸಿದ್ಧ ದೊರೆಗಳಾಗಿದ್ದರು. ಒಂದನೇ ಶಿವಮಾರ, ಶ್ರೀಪುರು, ಎರಡನೇ ಶಿವಮಾರ ಈ ಮನೆತನದ ಇತರ ಪ್ರಸಿದ್ಧ ದೊರೆಗಳಾಗಿದ್ದಾರೆ.[೩೦]

ತಲಕಾಡಿನ ಗಂಗ ಅರಸರು ದಕ್ಷಿಣ ಮತ್ತು ಪೂರ್ವಭಾಗದ ಜಿಲ್ಲೆಗಳಲ್ಲಿ ಕ್ರಿ.ಶ. ಆರಂಭದಿಂದ ೧೦೨೫ರವರೆಗೆ ಆಳ್ವಿಕೆ ನಡೆಸಿದ್ದ. ಈ ಪ್ರದೇಶದಲ್ಲಿ ಗಂಗರಿಗೆ ಸೇರಿದ ಅನೇಕ ದಾಖಲೆಗಳು ದೊರೆತಿವೆ. ಮಾಧವವರ್ಮನೆಂಬ ಅರಸ ಕ್ರಿ.ಶ. ೪೦೦ರ ಸುಮಾರಿಗೆ ಸೇರಿದ ಒಂದು ಶಾಸನವನ್ನು ಬರೆಸಿದನು. ಮಾಧವವರ್ಮನು ಪ್ರಾಯಶಃ ದಡಿಗ ದೊರೆಯ ಪುತ್ರನಾದ ಕಿರಿಯ ಮಾಧವನಿರಬಹುದು. ಇವನು ಬೋಧಿಸತ್ವನೆಂಬ ಬೌದ್ಧಸನ್ಯಾಸಿಗೆ ಭೂಮಿಯನ್ನು ದಾನವಾಗಿ ನೀಡಿದನೆಂಬ ವಿಷಯವು ಈ ಶಾಸನದಲ್ಲಿ ಉಲ್ಲೇಖಿತವಾಗಿದೆ.

ಗಂಗದೊರೆಗಳಿಗೆ ಸೇರಿದ ಕ್ರಿ.ಶ. ೫೪೫ರ ಸುಮಾರಿನ ಐದು ತಾಮ್ರಶಾಸನಗಳು ಮಧುಗಿರಿ ತಾಲ್ಲೂಕಿನ ಕಡಗಟೂರಿನ್ಲಲಿ ದೊರೆತಿದ್ದು, ಅರಸರ ಆಳ್ವಿಕೆ ಹಾಗೂ ಅವರು ಬಿರುದು ಬಾವಲಿಗಳ ಬಗ್ಗೆ ಮಾಹಿತಿ ನೀಡುತ್ತವೆ.

ಕ್ರಿ.ಶ. ೭೨೫ರಿಂದ ೭೮೮ರವರೆಗೆ ಗಂಗರ ಹೆಸರಾಂತ ದೊರೆ ಶ್ರೀಪುರುಷನಿಗೆ ಸಂಬಂಧಿಸಿದ ಶಾಸನಗಳು, ವೀರಗಲ್ಲುಗಳು ಈ ಪ್ರದೇಶದಲ್ಲಿ ದೊರೆತಿವೆ. ಅವುಗಳಲ್ಲಿ ಕಾಲ ನಮೂದಾಗಿಲ್ಲ. ಪ್ರಾಚೀನ ಪ್ರಾಗಿತಿಹಾಸದ ನೆಲೆಯಾದ ಹಿರೇಗುಂಡಗಲ್ಲಿನಲ್ಲಿ ಇವರ ಕಾಲಕ್ಕೆ ಸಂಬಂಧಿಸಿದ ಹಲವಾರು ವೀರಗಲ್ಲುಗಳು ಲಭ್ಯವಾಗಿವೆ. ಇವು ಗಂಗರು ಮತ್ತು ರಾಷ್ಟ್ರಕೂಟರ ಮಧ್ಯೆ ನಡೆದ ಹೋರಾಟದ ಬಗ್ಗೆ ಮಾಹಿತಿ ನೀಡುತ್ತವೆ.

ಗಂಗರಿಗೂ ಮತ್ತು ರಾಷ್ಟ್ರಕೂಟರಿಗೂ ನಡದ ಹೋರಾಟ ಭೀಕರವಾಗಿದ್ದು ಗಂಗರ ಕಡೆಯ ಅನೇಕ ವೀರರು ಸಾವನ್ನಪ್ಪಿದರು. ಇವರಿಬ್ಬರಿಗೂ ಮೇಲಿಂದ ಮೇಲೆ ನಡೆದ ಕದನಗಳು, ಹಿಂಚನೂರು, ಕಾಗೆಮೊಗೆಯೂರು, ಬಾಗೆಯೂರು ಮುಂತಾದ ಕಡೆ ನಡೆದಿದ್ದವು. ಈ ಯುದ್ಧ ಪರಿಣಾಮವಾಗಿ ಈ ಪರಿಸರದಲ್ಲಿ ೧೮ ವೀರಗಲ್ಲುಗಳನ್ನು ಒಂದೇ ಕಡೆ ನಡೆಯಲಾಗಿದೆ. ಕರ್ನಾಟಕದ ಬೇರೆ ಯಾವ ಸ್ಥಳಗಳಲ್ಲಿಯೂ ಈ ರೀತಿಯ ಈ ಬೃಹತ್ ಗಾತ್ರದ ವೀರಗಲ್ಲುಗಳು ಒಂದೇಕಡೆ ಲಭ್ಯವಾಗಿಲ್ಲ. ಒಟ್ಟಿನಲ್ಲಿ ಈ ಎಲ್ಲಾ ದಾಖಲೆಗಳು ಒಂದು ಹಂತದಲ್ಲಿ ಶತ್ರುಗಳ ಉಪಟಳಕ್ಕೆ ಸಿಕ್ಕಿದ ಗಂಗರು ತಮ್ಮ ಸ್ವಾತಂತ್ರ್ಯ ಮತ್ತು ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳಲು ಹೇಗೆ ಕಷ್ಟಪಟ್ಟಿರೆಂಬುದನ್ನು ತಿಳಿಸುತ್ತವೆ.[೩೧]

## ರಾಷ್ಟ್ರಕೂಟರು

ಕ್ರಿ.ಶ. ೬ನೇ ಶತಮಾನದ ಮಧ್ಯಭಾಗದಿಂದ ೮ನೇ ಶತಮಾನದ ಮಧ್ಯಭಾಗದವರೆಗೆ ದಖಿನ್ನಿನಲ್ಲಿ ಆಳಿದ ಬಾದಾಮಿ ಚಾಲುಕ್ಯರಿಗೆ ಸೇರಿದ ಯಾವ ದಾಖಲೆಯೂ ಈ ಕೋರಾ ಪರಿಸರದಲ್ಲಿ ಲಭ್ಯವಾಗಿಲ್ಲ.

ಬಾದಾಮಿ ಚಾಲುಕ್ಯರ ಉತ್ತರಾಧಿಕಾರಿಗಳಾಗಿ ರಾಷ್ಟ್ರಕೂಟರು ಕ್ರ.ಶ. ೭೫೩ರಿಂದ ೯೭೩ರವರೆಗೆ ಕರ್ನಾಟಕದ ಅನೇಕ ಭಾಗಗಳಲ್ಲಿ ಆಡಳಿತ ನಡೆಸಿದರು. ಕ್ರಿ.ಶ. ೭೫೩ರಲ್ಲಿ ರಾಷ್ಟ್ರಕೂಟರ ಪ್ರಸಿದ್ಧ ದೊರೆ ದಂತಿದುರ್ಗನು ಬಾದಾಮಿ ಚಾಲುಕ್ಯರ ಮೊದಲು ಅರಸನಾಗಿದ್ದು ಎರಡನೇ ಕೀರ್ತಿವರ್ಮನನ್ನು ಸೋಲಿಸುವುದರೊಂದಿಗೆ ರಾಷ್ಟ್ರಕೂಟರ ಪ್ರಭುತ್ವ ಸ್ಥಾಪಿಸಿದನು. ರಾಷ್ಟ್ರಕೂಟರು ಸ್ಥಳೀಯ ರಾಜರಾಗಿದ್ದು ಎರಡು ಶತಮಾನಗಳ ಕಾಲ ವೈಭವದಿಂದ ಕರ್ನಾಟಕವನ್ನಾಳಿದರು. ವಿಂಧ್ಯ ಪರ್ವತಗಳನ್ನು ದಾಟಿ ಎತ್ತರದ ಗುರ್ಜರ, ಪ್ರತೀಹಾರ ಮತ್ತು ಪಾಲರ ಮೇಲೆ ವಿಜಯಗಳನ್ನು ಸಾಧಿಸಿದ ಅಪ್ರತಿಮ ಸೈನಿಕ ಸಾಧನೆ ಇವರದು. ಧ್ರುವ, ಮೂರನೇ ಗೋವಿಂದ, ಅಮೋಘವರ್ಷ ಮತ್ತು ಮೂರನೇ ಕೃಷ್ಣರು ಈ ವಂಶದ ಪ್ರಖ್ಯಾತ ಸಾಮ್ರಾಟರಾಗಿದ್ದಾರೆ.[೩೨]

ರಾಷ್ಟ್ರಕೂಟ ಎಂಬ ಪದದ ಪ್ರಾಚೀನತೆಯ ಮೌರ್ಯರ ಕಾಲದವರೆಗೆ ಹೋಗುತ್ತದೆ. ಮೌರ್ಯ ಶಾಸನಗಳಲ್ಲಿ ರಾಷ್ಟ್ರಿಕ ಎಂಬ ಪದದ ಉಲ್ಲೇಖವಿದೆ.[೩೩] ಅಲ್ಟೇಕರ್ ಅವರು ರಾಷ್ಟ್ರಕೂಟ ಎಂಬ ಪದವು ರಾಷ್ಟ್ರ ಮತ್ತು ಕೂಟ ಎಂಬ ಎರಡು ಪದಗಳನ್ನು ಒಳಗೊಂಡಿದೆ ರಾಷ್ಟ್ರವೆಂದರೆ ಪ್ರದೇಶ, ಕೂಟ[೩೪] ಎಂದರೆ ಪ್ರದೇಶದ ನಾಯಕ. ಹೀಗೆ ರಾಷ್ಟ್ರಕೂಟ ಎಂಬ ಪದವು ಅಧಿಕೃತ ಪದನಾಮವಾಗಿದ್ದು ಕಾಲಾಂತರದಲ್ಲಿ ವಂಶದ ಹೆಸರಾಗಿ ಮಾರ್ಪಟ್ಟಿತು ಎಂದಿದ್ದಾರೆ.[೩೫] ಮಳಖೇಡದ ರಾಷ್ಟ್ರಕೂಟರ ಶಾಸನಗಳೂ ಇವರು ತಮ್ಮನ್ನು 'ಲಟ್ಟಲೂರ' ಪುರುಮರಾಧೀಶ್ವರ "ಲಟ್ಟಲಾರ ಪುರುವಿನಿಗ್ರತ"[೩೬] ಎಂದು ಕರೆದುಕೊಂಡಿದ್ದಾರೆ. ಇದರಿಂದ ಇಂದಿನ 'ಲಾತೂರು' ಇವರ ಮೂಲವಾಸಸ್ಥಾನವಾಗಿತ್ತೆಂದು ನಂಬಲಾಗಿದೆ. ಹಲವು ವಿದ್ವಾಂಸರು ಕನ್ನಡ ನಾಡು ನುಡಿಯನ್ನು ಪ್ರೋತ್ಸಾಹಿಸಿದ ಪ್ರಥಮ ಪ್ರಸಿದ್ಧ ಆಡಳಿತ ಮನೆತನವೆಂದು ಇವರು ಕನ್ನಡ ಮೂಲದವರೆಂದು ಅಭಿಪ್ರಾಯಪಟ್ಟಿದ್ದಾರೆ.

ದಂತಿದುರ್ಗನು ಸ್ವತಂತ್ರ ಆಡಳಿತದ ಸಂಸ್ಥಾಪಕನಾಗಿದ್ದಾನೆ. (ಕ್ರಿ.ಶ. ೭೩೫–೭೫೬). ಈತನು ಆರಂಭದಲ್ಲಿ ಬಾದಾಮಿ ಚಾಲುಕ್ಯರ ಮಾಂಡಲಿಕನಾಗಿದ್ದ. ರಾಷ್ಟ್ರಕೂಟ ಆಡಳಿತಕ್ಕೆ ಭದ್ರಬುನಾದಿ ಹಾಕಿದ ಕೀರ್ತಿ ಇವನದಾಗಿದೆ. ಮೊದಲನೇ ಕೃಷ್ಣನು ರಾಷ್ಟ್ರಕೂಟರ ಮತ್ತೊಬ್ಬ ಪ್ರಮುಖ ದೊರೆಯಾಗಿದ್ದಾನೆ. ಇವನು ದಂತಿದುರ್ಗನ ಚಿಕ್ಕಪ್ಪ (ಕ್ರಿ.ಶ. ೭೫೬–೭೭೪) ಈತನು ಚಾಲುಕ್ಯ ಮತ್ತು ಗಂಗರ ಕೆಲವು ಪ್ರಾಂತ್ಯಗಳನ್ನು ವಶಪಡಿಸಿಕೊಂಡು ರಾಷ್ಟ್ರಕೂಟರ ಆಡಳಿತ ಮತ್ತು ಕಲಾಕ್ಷೇತ್ರಕ್ಕೆ ಅನರ್ಘ್ಯರತ್ನ ಎಂಬುದಕ್ಕೆ ಸಾಕ್ಷಿಯಾಗಿ ಎಲ್ಲೋರಾದ ಕೈಲಾಸನಾಥದೇವಾಲಯವನ್ನು ಕಟ್ಟಿಸಿದನು.[೩೭] ರಾಷ್ಟ್ರಕೂಟ ದೊರೆಗಳಲ್ಲಿ ಧ್ರುವ ಪ್ರಸಿದ್ಧ ದೊರೆಯಾಗಿದ್ದು ಸೈನಿಕ ಕ್ಷೇತ್ರದಲ್ಲಿ ಮಹತ್ತರ ವಿಜಯಗಳನ್ನು ಸಾಧಿಸಿದನು. ಉತ್ತರಭಾರತ ಮತ್ತು ದಕ್ಷಿಣ ಭಾರತದಲ್ಲಿ ಅನೇಕ ವಿಜಯಗಳನ್ನು ಸಾಧಿಸಿ ಭಾರತದಲ್ಲಿ ಬಲಿಷ್ಟ ಅರಸನೆಂಬ ಹೆಗ್ಗಳಿಕೆಯನ್ನು ಪಡೆದನು.

ಮೂರನೇ ಗೋವಿಂದನು ಕ್ರಿ.ಶ. ೭೯೩–೮೧೪ರವರೆಗೆ ಆಳ್ವಿಕೆಯನ್ನು ನಡೆಸಿ ರಾಷ್ಟ್ರಕೂಟರ ಸಾಮ್ರಾಜ್ಯದ ಎಲ್ಲೆಯನ್ನು ವಿಸ್ತರಿಸಿದನು. ಮೂರನೇ ಗೋವಿಂದನ ಮಗನಾದ ಅಮೋಘವರ್ಷ ನೃಪತುಂಗನು ಕ್ರಿ.ಶ. ೮೧೪–೮೭೮ರಲ್ಲಿ ರಾಷ್ಟ್ರಕೂಟರ ಪ್ರಸಿದ್ಧ ದೊರೆಯಾಗಿ ಆಡಳಿತ ನಡೆಸಿದನು. ಈತನ ಆಡಳಿತಾವಧಿಯ

೬೪ ವರ್ಷಗಳ ವೀರೋಚಿತ ವಿಜಯಗಳಿಂದ ಸಾಹಿತ್ಯ, ಶಿಕ್ಷಣ, ಸಂಸ್ಕೃತಿಯ ಬೆಳವಣಿಗೆಗಳಿಂದ ಸಾಮಾಜಿಕ ಸಾಮರಸ್ಯದಿಂದ ಧಾರ್ಮಿಕ ಸದ್ಭಾವನೆಯಿಂದ ಪ್ರಜೆಗಳ ಸರ್ವತೋಮುಖ ಅಭಿವೃದ್ಧಿಯಿಂದ ಕೂಡಿದಿದ್ದು ಈತನ ಘನತೆಗೆ ಸಾಕ್ಷಿಯಾಗಿದೆ. ಕನ್ನಡ ಸಾಹಿತ್ಯ ಪುಟದಲ್ಲಿ ಶ್ರೀ ವಿಜಯ ರಚಿತ "ಕವಿರಾಜ ಮಾರ್ಗ" ಎಂಬ ಕೃತಿಯು ಉತ್ತುಂಗ ಶಿಖರದಲ್ಲಿ ರಾರಾಜಿಸುತ್ತಿದೆ. ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀ ವಿಜಯನು "ಕಾವೇರಿಯಿಂದ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭವಿಸಿದ ಜನಪದಂವಸು, ದಾವಳಯ ವಿಲೀನ ವಿಶದ ವಿಷಯ ವಿಶೇಷಂ"[೩೮] ವರ್ಣಿಸಿರುವುದು ಕನ್ನಡನಾಡಿನಲ್ಲಿ ಇವರ ಆಳ್ವಿಕೆಯ ವಿಸ್ತಾರವನ್ನು ಪ್ರತಿಬಿಂಬಿಸುತ್ತದೆ. ಇಂತಹ ವಿಶಾಲವಾದ ಆಳ್ವಿಕೆಯ ವಿಸ್ತಾರದಲ್ಲಿ ಕೋರಾ ಹೋಬಳಿ ಪರಿಸರದ ಕೆಲವು ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿರುವುದು ಸರ್ವವಿಧಿತವಾಗಿದೆ. ಕೋರಾ ಹೋಬಳಿ ಪರಿಸರವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತು. ರಾಷ್ಟ್ರಕೂಟರಿಗೆ ಸಂಬಂಧಿಸಿದಂತೆ ತುಮಕೂರು ಜಿಲ್ಲೆಯಲ್ಲಿ ಪ್ರಮುಖವಾಗಿ ಮೂರು ಶಾಸನಗಳು ಲಭ್ಯವಾಗಿವೆ. ಅವುಗಳಲ್ಲಿ ಗುಬ್ಬಿಯ ೬೧ನೇ ಶಾಸನವು ಪ್ರಮುಖವಾದುದು. ಇದೇ ಶಾಸನದಲ್ಲಿ ಚಾಲುಕ್ಯರ ಕುಟುಂಬಕ್ಕೆ ಸಂಬಂಧಿಸಿದ ವಿವರಣೆಯೂ ಇದೆ. ಚಾಲುಕ್ಯರ ಬಾಲವರ್ಮ, ಅವರ ಮಗ ಯಶೋವರ್ಮ, ಅವನ ಪುತ್ರ ವಿಮಲಾದಿತ್ಯರ ಬಗ್ಗೆ ವಿವರಣೆಗಳಿವೆ. ವಿಮಲಾದಿತ್ಯನು ವೀರ ರಾಜನೆಂದು ಹೆಸರು ಪಡೆದನು. ಕೋರಾದಲ್ಲಿ ದೊರೆತಿರುವ ವೀರಗಲ್ಲು ಶಾಸನಗಳು ನಮಗೆ ಹೆಚ್ಚಿನ ಮಾಹಿತಿ ಒದಗಿಸುತ್ತವೆ. ಆದರೆ ಖಚಿತವಾಗಿ ಹೇಳುವುದಾದರೆ ಹಿರೇಗುಂಡಗಲ್‌ನಲ್ಲಿನ ೧೮ ವೀರಗಲ್ಲುಗಳು ರಾಷ್ಟ್ರಕೂಟರು ಮತ್ತು ಗಂಗರ ನಡುವೆ ನಡೆದ ಹೋರಾಟದ ಬಗ್ಗೆ ಸ್ಪಷ್ಟವಾಗಿ ತಿಳಿಸುತ್ತವೆ.[೩೯] ಇವು ರಾಷ್ಟ್ರಕೂಟರಿಂದ ಗಂಗರಾಜ್ಯಕ್ಕೆ ನೇಮಕನಾಗಿದ್ದ ಒಬ್ಬ ವೈಸರಾಯಿ ಆಗಿದ್ದಿರಬೇಕು ಮತ್ತು ಗಂಗದೊರೆ ಶಿವಮಾರನು ಕ್ರಿ.ಶ. ೭೮೧ರ ಸುಮಾರಿಗೆ ಬಂಧಿಸಿರಬೇಕು. ರಾಷ್ಟ್ರಕೂಟರ ಮತ್ತೊಂದು ದಾಖಲೆ ಎಂದರೆ ಕೋರಾ ಪ್ರಾಂತ್ಯದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿ ದೊರೆತಿರುವ ಶಿರಾ ೨೭ನೇ ಶಾಸನ ಕೊನೆಯ ಅರಸು ಇಂದ್ರರಾಜನು ನಡೆಯಿಸಿದ ದಿಗ್ವಿಜಯಗಳು, ಕದನಗಳು ಹಾಗೂ ಅವನ ಸಾವಿನ ರೀತಿಯನ್ನು ತಿಳಿಸುವುದರಿಂದ ಈ ಶಾಸನವು ಇತಿಹಾಸಕಾರರಿಗೆ ಮಹತ್ವದ್ದಾಗಿದ್ದು, ಈ ಪರಿಸರದ ಪ್ರಾಮುಖ್ಯತೆಯನ್ನು ಪ್ರತಿಬಿಂಬಿಸುತ್ತದೆ. ಹಾಗೆಯೇ ಮಣ್ಣೆಯಲ್ಲಿ ದೊರೆತ ರಾಷ್ಟ್ರಕೂಟರ ಮೂರನೇ ದಾಖಲೆಯು ಸುಮಾರು ಕ್ರಿ.ಶ. ೯೦೩ ಸೇರಿದ್ದು ದೊರೆ ಎರಡನೇ ಕೃಷ್ಣನ ಕಾಲಾವಧಿಗೆ ಸಂಬಂಧಿಸಿ ಕೋರಾ ಪರಿಸರವು ಇವರ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟಿತ್ತು ಎಂಬುದನ್ನು ಇದು ಪ್ರತಿಬಿಂಬಿಸುತ್ತದೆ.[೪೦] ಒಟ್ಟಿನಲ್ಲಿ ಅಮೋಘವರ್ಷ ನೃಪತುಂಗ ೮೭೮ರಲ್ಲಿ ನಿಧನವಾದಾಗ ಮಗ ಎರಡನೇ ಕೃಷ್ಣನು ಅಧಿಕಾರಕ್ಕೆ ಬಂದು ಸಾಮ್ರಾಜ್ಯದ ಕೀರ್ತಿಗೆ ಕಾರಣನಾದನು.

## ಕಲ್ಯಾಣದ ಚಾಲುಕ್ಯರು

ತುಮಕೂರು ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಕಲ್ಯಾಣಿ ಚಾಲುಕ್ಯರು ಮಹತ್ತರ ಸ್ಮರಣೀಯ ಸಾಧನೆಗಳನ್ನು ಮಾಡಿದ್ದಾರೆ. ಇಂದಿನ ಬೀದರ್ ಜಿಲ್ಲೆಯ ಬಸವಕಲ್ಯಾಣ ಇವರ ರಾಜಧಾನಿಯಾಗಿತ್ತು. ಎರಡು ಶತಮಾನಗಳ ನಂತರ ರಾಷ್ಟ್ರಕೂಟರ ಸಾಮಂತನಾಗಿದ್ದ ಚಾಲುಕ್ಯವಂಶದ

ಎರಡನೆಯ ತೈಲಪನು ರಾಷ್ಟ್ರಕೂಟರ ಅರಸ ಎರಡನೇ ಕರ್ಕನನ್ನು ಸದೆಬಡಿದು ಚಾಲುಕ್ಯ ವಂಶದ ಅಧಿಕಾರವನ್ನು ಮರಳಿ ಸ್ಥಾಪಿಸಿದನು. ನಂತರ ಬಂದ ಚಾಲುಕ್ಯ ಅರಸರು ಕೋರಾ ಪರಿಸರದ ಕೆಲವು ಪ್ರದೇಶಗಳಲ್ಲಿ ತಮ್ಮ ಆಡಳಿತ ವಿಸ್ತರಿಸಿದ್ದರು.

ಎರಡನೇ ತೈಲಪನು (ಕ್ರಿ.ಶ. ೯೭೩-೯೯೭) ಚಾಲುಕ್ಯ ವಂಶದ ಪ್ರಥಮ ಸಾಮ್ರಾಟನಾಗಿದ್ದನು. ಸತ್ಯಾಶ್ರಯ, ಐದನೇ ವಿಕ್ರಮಾದಿತ್ಯ, ಎರಡನೇ ಜಯಸಿಂಹ, ಒಂದನೇ ಸೋಮೇಶ್ವರ ಮತ್ತು ಎರಡನೆಯ ಸೋಮೇಶ್ವರರು ಈ ವಂಶದ ದೊರೆಗಳಾಗಿದ್ದರು. ಕ್ರಿ.ಶ. ೧೦೭೬ರಲ್ಲಿ ಎರಡನೆಯ ಸೋಮೇಶ್ವರನನ್ನು ಬಂಧಿಸಿ ೬ನೇ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದು ಈ ಸಾಮ್ರಾಜ್ಯದ ಗಡಿಯನ್ನು ದಕ್ಷಿಣ ಕರ್ನಾಟಕದವರೆಗೆ ವಿಸ್ತರಿಸಿ ಆಳ್ವಿಕೆ ನಡೆಸಿದನು.

ಕಲ್ಯಾಣದ ಚಾಲುಕ್ಯರಿಗೆ ಸೇರಿದ ಶಾಸನಗಳು ತುಮಕೂರು ಜಿಲ್ಲೆಯ ಕೋರಾ ಹೋಬಳಿ ಪರಿಸರದ ವಿವಿಧ ಭಾಗಗಳಲ್ಲಿ ದೊರೆತಿವೆ. ಕ್ರಿ.ಶ. ೧೦೪೦ ರಿಂದ ೧೨೦೦ರ ಅವಧಿಗೆ ಸೇರಿವೆ ಈ ಶಾಸನಗಳಲ್ಲಿರುವ ವಿಷಯ ನೇರವಾಗಿ ಕಲ್ಯಾಣ ಚಾಲುಕ್ಯ ದೊರೆಗೆ ಸಂಬಂಧಿಸಿದೆ. ಪ್ರಾರಂಭದ ವಾಕ್ಯಗಳಲ್ಲಿ ಚಾಲುಕ್ಯರ ಪರಮಾಧಿಕಾರ ಹಾಗೂ ಅವರ ಬಿರುದು ಬಾವಲಿಗಳ ಬಗ್ಗೆ ಹೇಳಲಾಗಿದೆ. ಚಾಲುಕ್ಯ ದೊರೆಗಳು ಸತ್ಯಾಶ್ರಯ, ಇರಿವಟಿಡಂಗ, ಕೀರ್ತಿನಾರಾಯಣ ಎಂಬ ಬಿರುದು ಹೊಂದಿದ್ದರು. ಇವರ ಕಾಲವನ್ನು ನಿಗದಿಗೊಳಿಸುವುದು ಸುಲಭ ಸಾಧ್ಯವಾದುದಲ್ಲ. ಈ ಶಾಸನಗಳು ಚೋಳರ ಕಾಲಕ್ಕೆ ಸೇರಿದವುಗಳಾಗಿದ್ದರೆ ಉಳಿದವು ಹೊಯ್ಸಳರ ಕಾಲಕ್ಕೆ ಸೇರಿದವುಗಳಾಗಿವೆ. ಇವರ ಪರಮಾಧಿಕಾರವು ಈ ಪರಿಸರದ ಉತ್ತರಕ್ಕೆ ಮತ್ತು ಪಶ್ಚಿಮ ಭಾಗಗಳಿಗೆ ಮಾತ್ರ ಸೀಮಿತವಾಗಿತ್ತೆಂದು ತಿಳಿಯಲಾಗಿದೆ. ಇವರ ಕಾಲದ ಹೆಚ್ಚು ಶಾಸನಗಳು ತಿಪಟೂರು, ಚಿಕ್ಕನಾಯಕನಹಳ್ಳಿಯಲ್ಲಿ ದೊರೆತಿದ್ದು ಒಂದು ಶಾಸನ ಮಾತ್ರ ಕೋರಾ ಪರಿಸರದಿಂದ ೩೦ ಕಿ.ಮೀ. ದೂರದಲ್ಲಿರುವ ಗುಬ್ಬಿಯಲ್ಲಿ ದೊರೆತಿದೆ.[೪೧] ಈ ಶಾಸನದ ಆಧಾರದ ಮೇಲೆ ಕೋರಾ ಪರಿಸರದಲ್ಲಿ ಕಲ್ಯಾಣಿ ಚಾಲುಕ್ಯರ ಇತಿಹಾಸ ಆಳ್ವಿಕೆಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಯಬಹುದು.

## ನೊಳಂಬರು

ದಕ್ಷಿಣ ಕರ್ನಾಟಕದಲ್ಲಿ ರಾಷ್ಟ್ರಕೂಟರು ಮತ್ತು ಚಾಲುಕ್ಯರು ಆಳ್ವಿಕೆಯಲ್ಲಿದ್ದಾಗ ತುಮಕೂರು ಪರಿಸರದ ಕೋರಾ ಹೋಬಳಿ ಸೇರಿದಂತೆ ಸ್ಥಳೀಯ ಅರಸರಿಂದ ಪಲ್ಲವ ವಂಶಕ್ಕೆ ಸೇರಿದ ನೊಳಂಬರು ಅಥವಾ ನೊಣಬರು ಜಿಲ್ಲೆಯ ಉತ್ತರದ ತಾಲ್ಲೂಕುಗಳಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದವರಾಗಿದ್ದರು. ಇವರ ರಾಜ್ಯ (೩೨,೦೦೦ ವರಹಗಳ) 'ನೊಳಂಬವಾಡಿ'[೪೨] ಎಂಬ ಹೆಸರು ಪಡೆದಿತ್ತು. ಶಿರಾ ತಾಲ್ಲೂಕು ಉತ್ತರ ಗಡಿಯಲ್ಲಿರುವ "ಪಂಜೇರು"[೪೩] ಅಥವಾ "ಹೆಂಜೇರು"[೪೪] ನೊಳಂಬರ ರಾಜಧಾನಿಯಾಗಿತ್ತು. ಇಂತಹ ಪ್ರಸಿದ್ಧ ಇತಿಹಾಸವನ್ನು ಹೊಂದಿರುವ "ನೊಳಂಬರ" ಅಮೂಲ್ಯವಾದ ಇತಿಹಾಸವನ್ನು ತಿಳಿಯುವುದಕ್ಕೆ ಮುಂಚೆ "ನೊಳಂಭ" ಶಬ್ದದ ಅರ್ಥ ತಿಳಿಯುವುದು ಸೂಕ್ತವಾದುದಾಗಿದೆ.[೪೫]

"ನೊಣಬ" ಎಂಬ ಕನ್ನಡ ಶಬ್ದ ಭಾಷಾ ಚರಿತ್ರೆಯಲ್ಲಿ ಚರಿತ್ರಾರ್ಹ. ಅನೇಕ ಶಬ್ದಗಳು ಮೂಲರೂಪದಿಂದ ಬೆಳೆದು ಬದಲಾವಣೆಯಾಗಿರುವುದುಂಟು. ಉದಾ: ಕಬ್ಬ ಅಥವಾ ಕಬ್ಬಿಣ.[೪೬] ಇದು ಮೂಲ "ಕರ್ಬೋನ್ ಶಬ್ದದಿಂದ ಬಂದಿದೆ"[೪೭] ಕರ್ + ಪೋನ್ = ಕರ್ಬೋನ – ಕಬ್ಬೋನ್ – ಕಬ್ಬಿಣ – ಕಬ್ಣ ಆಗಿರುವಂತೆ ನೊಳಂಬ – ನೊಳಬ – ನೊಣಬ ಆಗಿದೆ.[೪೮] ನೊಳಂಬ ಎಂದರೆ ಸುಂದರ, ಚೆಲುವ, ಮುನ್ನುಗ್ಗುವವ ಎಂದು ಅರ್ಥೈಸಿದ್ದಾರೆ. "ನೊಳ್ಳೈ+ಅಂಬನ" = ನೊಳಂಬನ್. ಕನ್ನಡದಲ್ಲಿ 'ನೊಳಂಬ' ಆಗಿದೆ.[೪೯]

ಆಗ್ನೇಯ ಕರ್ನಾಟಕದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ನೊಳಂಬರು ಅಥವಾ ನೊಳಂಬ–ಪಲ್ಲವರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರ ವಹಿಸಿದ್ದರು ಇವರ ರಾಜಧಾನಿ ಆಗಿನ ಆಂಧ್ರ ಪ್ರದೇಶದ ಮಡಕಶಿರಾ ತಾಲ್ಲೂಕಿನಲ್ಲಿರುವ "ಹೆಂಜೇರು" ಹೇಮಾವತಿಯಾಗಿತ್ತು. ನಂತರ ಕ್ರಿ.ಶ. ೧೧ನೇ ಶತಮಾನದಲ್ಲಿ ಇವರು ತಮ್ಮ ರಾಜಧಾನಿಯನ್ನು ತುಂಗಭದ್ರಾ ತೀರದಲ್ಲಿರುವ ಕಂದೀಲಿಗೆ ವರ್ಗಾಯಿಸಿಕೊಂಡರು. ಪ್ರಾರಂಭದಲ್ಲಿ ನೊಳಂಬರಿಗೆ 'ಸಾಸಿರ ಎಂಬ ಸಣ್ಣ ಪ್ರಾಂತ್ಯದ ಮೂಲಕ ಆಳ್ವಿಕೆ ಪ್ರಾರಂಭಗೊಂಡು ವಿಸ್ತಾರವಾಯಿತ್ತು. ಕ್ರಿ.ಶ. ೯–೧೦ನೇ ಶತಮಾನದಲ್ಲಿ ಇವರ ಪ್ರಾಬಲ್ಯ ಹೆಚ್ಚಾಗಿ ಇವರ ರಾಜ್ಯವೂ ಬಹಳಮಟ್ಟಿಗೆ ವಿಸ್ತಾರಗೊಂಡು ನೊಳಂಬವಾಡಿ ೩೨೦೦೦ ಎಂಬ ವಿಸ್ತಾರವಾದ ಪ್ರಾಂತ್ಯವಾಯಿತು. ಈ ಪ್ರಾಂತ್ಯವು ಈಗಿನ ಕರ್ನಾಟಕದ ತುಮಕೂರು ಪ್ರದೇಶದ ಕೋರಾ ಪರಿಸರಕ್ಕೆ ವ್ಯಾಪಿಸಿ ಬೆಂಗಳೂರು, ಬಳ್ಳಾರಿ, ತಮಿಳುನಾಡು, ಆಂಧ್ರಪ್ರದೇಶ, ಅನಂತಪುರ, ಧರ್ಮಪುರಿ, ಮುಂತಾದ ಜಿಲ್ಲೆಗಳನ್ನೊಳಗೊಂಡಿತ್ತು.

ತುಮಕೂರು ಗಂಗರು ಪ್ರಥಮ ಆಳ್ವಿಕೆ ಪ್ರಾರಂಭಿಸಿ ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಿ ಚಾಲ್ಯಕರ ಮಾಂಡಳಿಕರಾಗಿಯೂ ಸಹ ಆಳ್ವಿಕೆ ನಡೆಸಿದರು. ಇವರು ಕರ್ನಾಟಕದ ಭವ್ಯ ಇತಿಹಾಸ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿದವರಲ್ಲೊಬ್ಬರಾಗಿದ್ದಾರೆ. ನೊಳಂಬರು ರಾಜಕೀಯ ಇತಿಹಾಸದ ಜೊತೆಗೆ ಕೋರಾದ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಬೆಳೆಸುವುದರಲ್ಲಿಯೂ ಬಹಳ ಆಸಕ್ತಿ ಹೊಂದಿದ್ದರು. "ನೊಳಂಬ ಶೈಲಿ" ಎಂಬ ಪ್ರತ್ಯೇಕ ಒಂದು ಶೈಲಿಯ ಉಗಮಕ್ಕೂ ಕಾರಣರಾದರು. ನೊಳಂಬರ ವಂಶದ ಮೂಲಪುರುಷ "ತ್ರಿಣಯನ" ಇವನು ಕಾಲ್ಪನಿಕ ವ್ಯಕ್ತಿಯೆಂದು ಊಹಿಸಿದೆಯಾದರೂ ಈ ವಂಶದ ನಿಜವಾದ ಸ್ಥಾಪಕ.[೫೦] ಇವನೇ ಮಂಗಳ (ಕ್ರಿ.ಶ. ೭೪೦–೭೫೦) ಮೊದಲ ಪ್ರಸಿದ್ಧ ದೊರೆಯಾಗಿದ್ದಾನೆ. ನಂತರ ಸಿಂಹಪೋತನು ಅಧಿಕಾರಕ್ಕೆ ಬಂದು ಕಲಿನೊಳಂಬಾಧಿರಾಜ, ಪಂಚಮಹಾಶಬ್ದ ಮತ್ತು ಪೃಥ್ವೀವಲ್ಲಭ ಎಂಬ ಬಿರುದುಗಳಿದ್ದವು. ನಂತರ ಚಾರುಪೊನ್ನೇರನು (ಕ್ರಿ.ಶ. ೮೦೦–೮೩೦)ರಲ್ಲಿ ಆಳ್ವಿಕೆಗೆ ಬಂದನು ಈತನನ್ನು ಅನೇಕ ಶಾಸನಗಳೂ ಪರಮೇಶ್ವರ ಪಲ್ಲವಾದಿ ರಾಜನೆಂದೂ ಕರೆದಿವೆ. ಈತನು ರಾಷ್ಟ್ರಕೂಟ ೩ನೇಯ ಗೋವಿಂದನ ಕೈಕೆಳಗೆ ಚಿತ್ರದುರ್ಗ ಜಿಲ್ಲೆಯಲ್ಲಿ ರಾಜ್ಯವಾಳುತ್ತಿದ್ದ. ಈತನು ನೊಳಂಬರಿಗೆ ೧೦೦ ನೀರ್ಗುಂದ ನಾಡು – ೩೦೦ ಇವುಗಳ ಮೇಲೆ ಆಳ್ವಿಕೆ ಮಾಡುತ್ತಿದ್ದನು. ಈತನ ಮಗ ಪಲ್ಲವಮಲ್ಲನು ತೊಂಡೂರು–೧೨, ಅಮ್ಮವಳ್ಳಿ–೧೨,

ಕೋಲೂರು-೧೨ ಗಂಗವೂರು-೩೦ ಮೊದಲಾದ ಪ್ರಾಂತ್ಯಗಳನ್ನು ಆಳುತ್ತಿದ್ದನು.[೫೧] ನಂತರ ಒಂದನೇ ಪೊಳಲ್ಚೋರ (ಕ್ರಿ.ಶ. ಸುಮಾರು ೮೩೦-೮೭೦ ರಲ್ಲಿ ಪಟ್ಟಕ್ಕೆ ಬಂದನು. ಈತನನ್ನು ಶಾಸನಗಳಲ್ಲಿ ಹೆಚ್ಚಾಗಿ ನೊಳಂಬಾದಿರಾಜ ಎಂಬ ಹೆಸರಿನಲ್ಲಿ ಕರೆಲ್ಪಟ್ಟಿದೆ. ಇವನು ಗಂಗರಾಜ ಒಂದನೆಯ ನೀತಿಮಾರ್ಗ ಸಾಮಂತನಾಗಿ ಆಳಿದನು. ನಂತರ ಒಂದನೆಯ ಪೊಳಲ್ಮೋರನ ಮಗ ಮಹೇಂದ್ರ ಕ್ರಿ.ಶ. ೮೭೮ರ ಸುಮಾರಿನಲ್ಲಿ ಪಟ್ಟಕ್ಕೆ ಬಂದಿರಬೇಕು. ಅಲ್ಲದೆ ಹಿಂದೂಪುರದ ಬಳಿಯಲ್ಲಿರುವ ಕಂಬದೂರಿನಲ್ಲಿ ಪೊಳಲ್ಚೋರನ ಒಂದು ಶಾಸನವಿದ್ದು ಇದು ಇವರ ಬಗ್ಗೆ ವಿವರಣೆ ನೀಡುತ್ತದೆ. ಪಟ್ಟಕ್ಕೆ ಬಂದು ಬೆಂಗಳೂರು ಜಿಲ್ಲೆಯ ಎರಡು ಶಾಸನಗಳಲ್ಲಿ ಗಂಗರ ಸಾಸಿರ ಪ್ರಾಂತ್ಯವನ್ನು ಆಳುತ್ತಿದ್ದನೆಂದು ಹೇಳಿದೆ. ನೊಳಂಬಾಧಿರಾಜ ಮಹೇಂದ್ರ ಚೋಳರ ಪ್ರದೇಶವಾದ ರೇನಾನ್ದು ೭೦೦೦ದ ಭಾಗವನ್ನು ಆಳುತ್ತಿದ್ದರು. ಇವನು ಮಹತ್ವಾಕಾಂಕ್ಷಿಯಾಗಿದ್ದು ಕಳಗಟ್ಟೂರಿನ ಒಂದು ಶಾಸನದಲ್ಲಿ ಈತನು "ಷಣ್ಮವತೀ (ಸಹಸ) ಪ್ರಮಿತಗಂಗೆ (ಮಂಡಲ) ವಿಲಾಸಿನ್ಯೆ ಕವಲ್ಲಭೋಮಹೀಂದ್ರ ಎಂದು ವರ್ಣಿತನಾಗಿದ್ದಾನೆ. ಇವನು ಸ್ವತಃ ವೀರ ಹಾಗೂ ದಂಡನಾಯಕನಾಗಿದ್ದು ಯುದ್ಧದಲ್ಲಿ ಶತ್ರುಗಳ ಮೇಲೆ ತಾನೇ ನುಗ್ಗಿ ವಿಜಯವನ್ನು ಸಾಧಿಸುತ್ತಿದ್ದನು. ನಂತರ ಒಂದನೇ ಅಯ್ಯಪ್ಪದೇವ (೮೯೭-೯೩೪) ಬೀರನೊಳಂಬ ಅಣ್ಣಿಗ (೯೩೪-೯೪೦) ಇರಿವನೊಳಂಬ ದಿಲೀಪ ಕ್ರಿ.ಶ. ೯೪೧-೯೬೭ ನನ್ನಿನೊಳಂಬ (ಕ್ರಿ.ಶ. ೯೬೮-೯೭೧), ಎರಡನೇ ಪೊಳಲ್ಚೋರ, ಎರಡನೇ ಮಹೇಂದ್ರ (೯೭೭-೯೮೨) ಇರಿವ ನೊಳಂಬ ಘಂಟೆಯಂಕಕಾರ, ೧೦೧೦-೧೦೨೪ ಉದಯಾದಿತ್ಯ, ಜಗದೇಕಮಲ್ಲ ಇಮ್ಮಡಿ ನೊಳಂಬ, ತ್ರೈಲೋಕ್ಯಮಲ್ಲಿ ನಿನ್ನಿ ನೊಳಂಬ ಪಟ್ಲಿಮ ಪೆರ್ಮಾನಡಿ, ತ್ರೈಲೋಕ್ಯಾಮಲ್ಲಿನನ್ನಿನೊಳಂಬ ಎಂಬ ರಾಜವಂಶದೊಂದಿಗೆ ಕ್ರಿ.೧೦೫೪ರಲ್ಲಿ ಮುಕ್ತಾಯಗೊಂಡಿತೆಂದು ಹೇಳಬಹುದು.[೫೨]

## ಚೋಳರು

ತುಮಕೂರಿನ ಕೋರಾ ಪರಿಸರದಲ್ಲಿ ಆಳ್ವಿಕೆ ಮಾಡಿದ ಅರಸ ಮನೆತನಗಳಲ್ಲಿ ಚೋಳ ಸಾಮ್ರಾಜ್ಯವೂ ಒಂದಾಗಿದೆ. ಪಲ್ಲವ ಸಾಮ್ರಾಜ್ಯದ ಪತನದ ನಂತರ ಅಧಿಕಾರಕ್ಕೆ ಬಂದ ಚೋಳರು ಕ್ರಿ.ಶ. ೯ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ್ದರು. ಕೋರಾ ಪರಿಸರದಲ್ಲಿ ಕ್ರಿ.ಶ. ಸುಮಾರು ೧೧೭೦ರವರೆಗೆ ಅಂದರೆ ಹೊಯ್ಸಳರು ಪ್ರಬಲರಾಗುವವರೆಗೂ ಚೋಳರಸರು ಆಳ್ವಿಕೆ ನಡೆಸಿದರು. ಇಳ್ಳೆಯಾನ್ ಚೋಳ ಎಂಬುವನು ಪ್ರಥಮ ದೊರೆಯಾಗಿದ್ದನು.[೫೩] ನಂತರ ಕರಿಕಾಳ ಚೋಳ ಅಧಿಕಾರಕ್ಕೆ ಬಂದನು. ಇವನು ಅತ್ಯಂತ ಪ್ರಸಿದ್ಧ ದೊರೆಯಾಗಿದ್ದು ಪಾಂಡ್ಯರ ಪ್ರಾಬಲ್ಯ ತಗ್ಗಿಸಿದನು. ತದನಂತರ ವಿಜಯಾಲಚೋಳ, ಕ್ರಿ.ಶ. ೮೫೦-೮೭೧,. ಒಂದನೇ ಆದಿತ್ಯ - ಕ್ರಿ.ಶ. ೮೭೧-೯೦೭, ಒಂದನೇ ಪರಾಂತಕ ಕ್ರಿ.ಶ. ೯೦೭-೯೫೫, ರಾಜರುಗಳು ಕ್ರಮವಾಗಿ ಆಳ್ವಿಕೆ ನಡೆಸಿದರು. ಚೋಳರ ಕಾಲಾವಧಿಯಲ್ಲಿ ಚಾಲುಕ್ಯರಿಗೂ ಮತ್ತು ಚೋಳರಿಗೂ ಯುದ್ಧಗಳು ನಡೆದು ಚೋಳರು ವಿಜಯಿಗಳಾದರು. ಚೋಳರಿಗೆ ಸಂಬಂಧಿಸಿದ ಎರಡು ಶಾನಗಳು ಮಾತ್ರ ತುಮಕೂರಿನ ಪರಿಸರದಲ್ಲಿ ಲಭ್ಯವಾಗಿದ್ದು, ಇವರ ಆಡಳಿತ ವ್ಯಾಪ್ತಿಯು ಕೋರಾ ಪರಿಸರದವರೆಗೆ ವ್ಯಾಪಿಸಿತ್ತು. ಈ ಎರಡೂ ಶಾಸನಗಳು ತಮಿಳಿನಲ್ಲಿ ಲಭ್ಯವಾಗಿದ್ದು, ಇವುಗಳಲ್ಲಿ

ಮೊದಲನೆಯದು ಕ್ರಿ.ಶ. ೧೦೪೪-೧೦೫೪ರವರೆಗೆ ಕೇವಲ ೧೦ ವರ್ಷ ಚೋಳ ಸಾಮ್ರಾಜ್ಯದ ಅಧಿಪತಿಯಾಗಿದ್ದು ಒಂದನೇ ರಾಜಾಧಿರಾಜನ ಕಾಲಕ್ಕೆ ಸಂಬಂಧಿಸಿದುದಾಗಿದೆ. ಇದನ್ನು ೧೩ನೇ ವರ್ಷದಲ್ಲಿ ಕ್ರಿ.ಶ. ೧೦೪೮ರಲ್ಲಿ ಹೊರಡಿಸಲಾಗಿದೆ. ಈತನ ಕಾಲಾವಧಿಯಲ್ಲಿ ಚಾಲುಕ್ಯರು ದಂಗೆ ಎದ್ದರು. ಇದನ್ನು ವೀರಾವೇಶದಿಂದ ಹೋರಾಡಿ ಹಿಮ್ಮೆಟ್ಟಿಸಿದನು. ಇದಕ್ಕೆ ನಿದರ್ಶನವೆಂಬಂತೆ ಹಲವಾರು ವೀರಗಲ್ಲುಗಳು ಲಭ್ಯವಾಗಿವೆ. ಇವನ ಕಾಲಾವಧಿಯು ಕಲೆ ಮತ್ತು ವಾಸ್ತು ಶಿಲ್ಪದ ಕ್ಷೇತ್ರದಲ್ಲಿ ತನ್ನದೇ ಆದ ಮಹತ್ವವನ್ನು ಉಳಿಸಿಕೊಂಡಿದ್ದನು. ಉದಾ: ರಾಮಗೊಂಡನಹಳ್ಳಿಯಲ್ಲಿ ನಿರ್ಮಿಸಿರುವ ಸೋಮೇಶ್ವರ ದೇವಾಲಯದ ನಿರ್ಮಾಣವು ಕಲೆ ಮತ್ತು ವಾಸ್ತುಶಿಲ್ಪಕ್ಕೆ ನೀಡಿದ ಭವ್ಯ ಕೊಡುಗೆಯಾಗಿದೆ. ಇದು ಹಾಳಾಗುವ ಸ್ಥಿತಿಯಲ್ಲಿದ್ದುದರಿಂದ ೨೦೦೫ರಲ್ಲಿ ಊರಿನ ಗ್ರಾಮಸ್ಥರು ಜೀರ್ಣೋದ್ಧಾರ ಮಾಡಿರುತ್ತಾರೆ.

ಚೋಳರ ಕಾಲದ ಎರಡನೇ ಶಾಸನವು ಕ್ರಿ.ಶ. ೧೦೫೭-೧೦೬೪ರವರೆಗೆ ಆಳ್ವಿಕೆ ಮಾಡಿದ ವೀರರಾಜೇಂದ್ರ ಚೋಳನ ೧೦ನೇ ವರ್ಷದಲ್ಲಿ ೧೦೬೧ರಲ್ಲಿ ಹೊರಡಿಸಲಾಗಿದ್ದು ಗಂಗವಾಡಿ ಮತ್ತು ನೊಳಂಬವಾಡಿಗಳು ಚೋಳಮಂಡಲಕ್ಕೆ ಸೇರಿದ್ದುದರಿಂದ ಕೋರಾ ಪರಿಸರದ ಕೆಲವು ಪ್ರದೇಶಗಳು ಚೋಳರ ರಾಜರ ಆಳ್ವಿಕೆಗೆ ಒಳಪಟ್ಟಿದ್ದವು.

## ಹೊಯ್ಸಳರು

ಬಾದಾಮಿ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರಂತೆ ವಿಶಾಲ ಕರ್ನಾಟಕವನ್ನಾಳಿದ ರಾಜವಂಶಗಳಲ್ಲಿ ಹೊಯ್ಸಳರು ಪ್ರಮುಖರಾಗಿದ್ದಾರೆ. ಕ್ರಿ.ಶ. ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ಹೊಯ್ಸಳರು ಕರ್ನಾಟಕದ ಇತಿಹಾಸದಲ್ಲಿ ತಮ್ಮದೇ ಆದ ಸ್ಥಾನವನ್ನು ಉಳಿಸಿಕೊಂಡಿದ್ದಾರೆ. ಇಲ್ಲಿ ದೊರೆತಿರುವ ಶಾಸನಗಳ ಆಧಾರದಿಂದ ಹೊಯ್ಸಳರು ತಮ್ಮ ಆಳ್ವಿಕೆಯ ಅವಧಿಯನ್ನು ಕೋರಾ ಪರಿಸರನ್ನೊಳಗೊಂಡಂತೆ ಇಡೀ ತುಮಕೂರು ಜಿಲ್ಲೆಯನ್ನು ಆಕ್ರಮಿಸಿಕೊಕಂಡಿದ್ದು, ಇಲ್ಲಿ ಆಳ್ವಿಕೆ ನಡೆಸಿದರೆಂದು ತಿಳಿದುಬರುತ್ತದೆ. ಹೀಗಾಗಿ ಪ್ರಸ್ತುತ ಪ್ರದೇಶವೂ ಹೊಯ್ಸಳ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ.

ವರ್ಧಮಾನ ಸುದತ್ತ ಮುನಿಗಳಿಂದ ಸ್ಥಾಪಿತವಾದ ಈ ಸಾಮ್ರಾಜ್ಯದ ಮೂಲ ಪುರುಷ ಸಳ.[೫೪] ನಂತರ ನೃಪಕಾಯ, ವಿನಯಾದಿತ್ಯ, ಎರೆಯಂಗ, ಒಂದನೆಯ ವೀರಬಲ್ಲಾಳರ ಆಳ್ವಿಕೆ ನಡೆಸಿ ನಂತರ ವಿಷ್ಣುವರ್ಧನನು ಕ್ರಿ.ಶ. ೧೧೧೦೮-೧೧೪೨ರವರೆಗೆ ಆಳ್ವಿಕೆ ನಡೆಸಿದನು. ೩೩ಕಿ.ಮೀ. ದೂರದಲ್ಲಿರುವ ಗುಬ್ಬಿ ಶಾಸನದಲ್ಲಿ ಗಂಗವಾಡಿ ೯೬೦೦೦ ಮತ್ತು ನೊಳಂಬವಾಡಿ ೩೨೦೦೦ಗಳು ವಿಷ್ಣುವರ್ಧನನ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿದುಬಂದಿದೆ. ಅದೇ ರೀತಿ ಕ್ರಿ.ಶ. ೧೧೫೭ರಲ್ಲಿ ಬರೆಸಲ್ಪಟ್ಟ ಕೋರಾ ಪರಿಸರದ ಶಾಸನವು ಗೂಳೆಬಾಚಿ ಎಂಬ ಪ್ರಸಿದ್ಧ ಪಾಳೇಗಾರನ ಬಗ್ಗೆ ತಿಳಿಸುವುದು. ಇಲ್ಲಿ ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಗಮನಿಸಬೇಕಾದ ವಿಷಯವಾಗಿದೆ.

## ವಿಜಯನಗರ ಸಾಮ್ರಾಜ್ಯ

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿ ಅಧಿಕಾರಕ್ಕೆ ಬಂದ ಮತ್ತೊಂದು ಪ್ರಮುಖ ರಾಜ ಮನೆತನವೆಂದರೆ ವಿಜಯನಗರ ಸಾಮ್ರಾಜ್ಯ. ಹೊಯ್ಸಳರ ನಂತರ ಅಧಿಕಾರಕ್ಕೆ ಬಂದ ವಿಜಯನಗರ ಸಾಮ್ರಾಜ್ಯ ಕ್ರಿ.ಶ. ೧೩೩೬ರಲ್ಲಿ ಅಧಿಕಾರಕ್ಕೆ ಬಂದು ಕ್ರಿ.ಶ. ೧೫೬೮ರವರೆಗೆ ಸುಮಾರು ೨೨೯ ವರ್ಷಗಳ ಕಾಲ ಸುದೀರ್ಘ ಆಳ್ವಿಕೆ ಮಾಡಿದ ಭವ್ಯ ಪರಂಪರೆಯನ್ನು ಹೊಂದಿದ ಸಾಮ್ರಾಜ್ಯ ಉತ್ತರ ಭಾರತದಲ್ಲಿ ಮುಸ್ಲಿಂ ದಾಳಿಕೋರರ ಉಪಟಳದಿಂದ ದಕ್ಷಿಣ ಭಾರತಕ್ಕೆ ಬಂದು ಅಳಿವಿನ ಅಂಚಿನಲ್ಲಿದ್ದ ಹಿಂದೂ ಧರ್ಮದ ರಕ್ಷಣೆಗಾಗಿ ಉದಯವಾದ ಪ್ರಸಿದ್ಧ ರಾಜಮನೆತನವಾಗಿದೆ.

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯು ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ಅತೀ ಹೆಚ್ಚು ಉನ್ನತಿಯನ್ನು ಕಂಡುಕೊಂಡಿತು. ಕ್ರಿ.ಶ. ೧೩೩೬ರಿಂದ ೧೨೫೬ರವರೆಗೆ ಆಳಿದ ಒಂದನೇ ಹರಿಹರನ ಕಾಲದಲ್ಲಿ ತುಮಕೂರು ನಗರದ ಜೊತೆಗೆ ತುಮಕೂರಿನ ಸುತ್ತಮುತ್ತಲಿನ ಕೋರಾ ಪರಿಸರವೂ ವಿಜಯನಗರ ಸಾಮ್ರಾಜ್ಯದಲ್ಲಿ ಬೆರೆತುಹೋಯಿತು.[೫೫]

ಕ್ರಿ.ಶ. ೧೨೪೬ರಲ್ಲಿಯೂ ಈ ಪ್ರದೇಶವು ವಿಜಯನಗರ ಸಾಮ್ರಾಜ್ಯದಲ್ಲಿ ಸೇರಿಹೋದರೂ, ಒಂದನೇ ಹರಿಹರನು ೧೩೫೬ರವರೆಗೂ ಸಿಂಹಾಸನಾರೂಢನಾಗಿದ್ದರೂ ಅವನಿಗೆ ಸಂಬಂಧಿಸಿದ ಯಾವುದೇ ಶಾಸನವು ಈ ಪ್ರದೇಶದಲ್ಲಿ ಲಭ್ಯವಾಗಿಲ್ಲ. ಈ ಪ್ರದೇಶದಲ್ಲ ದೊರೆಕಿರುದ ಬಹಳ ಹಿಂದಿನ ದಾಖಲೆ ಎಂದರೆ ಹರಿಹರರಾಯರ ಪುತ್ರ ಬುಕ್ಕರಾಯ ಎಂಬುವರು ಶಾಲಿವಾಹನ ಶಕೆ ೧೩೫೨ನೇ ಸಾಧಾರಣವಾದ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆಯ ಭಾನುವಾರ ಅರುಣೋದಯದ ಪುಣ್ಯಕಾಲದಂದು ಅಹೋಬಲಾರ್ಯನ ಪುತ್ರನಾದ ಕೃಷ್ಣಯಜ್ವಾ ಎಂಬುವವರ ಪುತ್ರರಾದ ವೇದಾಂಗ ಪಾರಂಗತರಾದ ಸುಬ್ಬಾದೀಕ್ಷಿತರೆಂಬುವರಿಗೆ ಘನ ಶೈಲ ಪ್ರಾಂತ್ಯದ ಕೋರಾ ರಾಷ್ಟ್ರಕ್ಕೆ ಸಂಬಂಧಪಟ್ಟ 'ಆನೆಬಿದ್ದದರಿ' ಎಂಬ ಸ್ಥಳದಲ್ಲಿನ ಘಟ್ಟದಹಳ್ಳಿ ಎಂಬ ಗ್ರಾಮವನ್ನು "ಬುಕ್ಕರಾಯಪುರ" ಎಂಬ ಹೆಸರಿನಿಂದ ದಾನಮಾಡಿರುವುದಾಗಿ" ದಾನ ಶಾಸನದಿಂದ ತಿಳಿದುಬರುತ್ತದೆ. ಇಂದು ಈ ಪ್ರದೇಶವು "ಅಹೋಬಲ ಅಗ್ರಹಾರ" ಎಂದೇ ಪ್ರಸಿದ್ದಿಯಾಗಿದೆ.[೫೬] ಈ ಪ್ರದೇಶದಲ್ಲಿ ದೊರೆತಿರುವ ಬಹಳ ಹಿಂದೆ ಮತ್ತೊಂದು ದಾಖಲೆ ಎಂದರೆ ಕ್ರಿ.ಶ.೧೩೫೪ದ ಪಾವಗಡದ ೭೪ನೇ ಶಾಸನ ಇದು ಬುಕ್ಕರಾಯ ಅಥವಾ ಒಂದನೇ ಬುಕ್ಕರಾಯನ ಕಾಲಕ್ಕೆ ಸಂಬಂಧಿಸಿದುದಾಗಿದೆ ಕ್ರಿ.ಶ.೧೩೮೭ರ ತುಮಕೂರಿನ ೩೯ನೇ ಶಾಸನ ಹಾಮಂಡಲೀಶ್ವರ ವೀರಬುಕ್ಕಣ್ಣ ಒಡೆಯರ್. ಅವನ ವಿಷಯ ತಿಳಿಸುತ್ತದೆ. ಕ್ರಿ.ಶ.೧೪೦೩ರ ಶಿರಾ ೯೫ನೇ ತಾಮ್ರಶಾಸನವು ಪೇಳೂರುನಾಡಿನ ನೀಬೂರು ಗ್ರಾಮದ ಬಳಿಯ ಕಾಡಿನಲ್ಲಿ ಆನೆಬಿದ್ದದರಿ ಬೆಟ್ಟದ ಪಶ್ಚಿಮಕ್ಕೆ ಒಂದು ಹಳ್ಳಿ ಮತ್ತು ಕೆರೆಯನ್ನು ಕಟ್ಟಿಸಿದನೆಂದು, ಈ ಹಳ್ಳಿಯನ್ನು ಹರಿಹರರಾಯರ ಪುರವೆಂದು ಕರೆದು ೮೦ ಹಾಸ್ಸಗಳಾಗಿ ಮಾಡಿ ಬ್ರಾಹ್ಮಣರಿಗೆ ದಾನ ಮಾಡಲಾಯಿತ್ತೆಂದು ತಿಳಿದು ಬರುತ್ತದೆ. ತುಳುವವಂಶ ನರಸನಾಯಕ ಕ್ರಿ.ಶ.೧೪೯೧-೧೫೦೩ರವರೆಗೆ ವಿಜಯನಗರವನ್ನು ಆಳಿದ ಈ ಅವಧಿಯಲ್ಲಿ ತುಳುವ ನರಸನಾಯಕ ಪಾಳ್ಯದ ಇಮ್ಮಡಿ

ನರಸನಾಯಕನಿಗೆ ಸಂಬಂಧಿಸಿದ ದಾಖಲೆಗಳು ಈ ಪ್ರದೇಶದಲ್ಲಿ ದೊರೆತಿವೆ.[೫೭] ೧೪೯೬ರ ಮಿಡಿಗೇಶಿ ೨೩ನೇ ಶಿಲಾಶಾಸನವು ನಾಗೇನಹಳ್ಳಿಯ ಬಳಿ ದೊರಕಿದೆ. ಇದು ಒಂದು ಧರ್ಮಶಾಸನವಾಗಿದ್ದು ಕೋರಾ ನಾಡಿನ ತುಮಕೂರು ಮಹಾರಾಜಧಾನಿಯಲ್ಲಿ ಸೇರಿರುವ ನಾಗೇನಹಳ್ಳಿಯ ಧರ್ಮಾಧಿಕಾರವು ರಾಜನಿಂದ ನರಸನಾಯಕನಿಗೆ ನೀಡಿರುವ ವಿಷಯ ಉಲ್ಲೇಖಿತವಾಗಿದೆ. ವಿಜಯನಗರ ಕಾಲದ ಮಿಕ್ಕ ಶಾಸನಗಳು ಬಹುತೇಕವು ಕೃಷ್ಣದೇವರಾಯ (೧೫೦೯-೧೫೨೯) ಅಚ್ಯುತರಾಯ (೧೫೨೯-೧೫೪೨) ಸದಾಶಿವರಾಯ (೧೫೪೨-೧೫೭೯) ಇವರಿಗೆ ಸೇರಿದ್ದವು. ಇವುಗಳಲ್ಲಿ ಕೆಲವು ಐತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವ ಪಡೆದಿದ್ದರೂ ಅವುಗಳೆಲ್ಲವೂ ಭೂಮಿ, ಗ್ರಾಮಗಳನ್ನು ದಾನವಾಗಿ ನೀಡಿದ್ದು, ಕೆಲವು ಜಾತಿಯವರಿಗೆ ಕಂದಾಯ ಮಾಫಿ ಮಾಡಿದ್ದನ್ನು ತಿಳಿಸುತ್ತದೆ. ೧೫ ಮತ್ತು ೧೬ನೇ ಶತಮಾನಗಳಲಲಿ ವಿಜಯನಗರದ ಅರಸರು ತಮ್ಮ ಆಶ್ರಯದಲ್ಲಿದ್ದ ಅಧಿಕಾರಿಗಳಿಗೆ, ಸಾಮಂತರಿಗೆ ಮತ್ತು ಪಾಳೇಗಾರರಿಗೆ ಭೂ ಪ್ರದೇಶಗಳನ್ನು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿದ್ದಲ್ಲದೆ ವಿವಿಧ ಬಿರುದು ಬಾವಲಿಗಳನ್ನು ನೀಡಿದರು. ಆಯಾ ಅಧಿಕಾರಿಗಳು ಪಾಳೇಗಾರರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಅವರಿಗೆ ಆಯಾ ಪ್ರದೇಶಗಳ ಆಳ್ವಿಕೆಯ ಹಕ್ಕು ನೀಡಿದರು. ಹಾಗಾಗಿ ಅಂತಹ ಸಾಮಂತ ಸಂಸ್ಥಾನಗಳನ್ನು ಅಧೀನ ಪಾಳೇಪಟ್ಟುಗಳನ್ನು ಕೋರಾ ಪರಿಸರದಲ್ಲಿ ಆಳ್ವಿಕೆ ಮಾಡಿರುವುದನ್ನು ನೋಡಬಹುದು.

**ಕೋರಾ ನಾಡಪ್ರಭುಗಳ ಆಳ್ವಿಕೆ**

ಕರ್ನಾಟಕ ಇತಿಹಾಸದಲ್ಲಿ ೧೧ನೇ ಶತಮಾನದ ಮಧ್ಯದ ವೇಳೆಗೆ ನೊಳಂಬರ ಆಳ್ವಿಕೆಯ ಒಂದು ಘಟ್ಟ ಅಂತ್ಯಗೊಂಡು ನಂತರ ಮತ್ತು ೧೫ನೇ ಶತಮಾನದಿಂದ ನೊಳಂಬರ ದ್ವಿತೀಯ ಘಟ್ಟ ಪ್ರಾರಂಭವಾಗುತ್ತದೆ. ನೊಳಂಬರು ವಿಶೇಷವಾಗಿ ಮಧುಗಿರಿ ಮತ್ತು ಸುತ್ತಮುತ್ತಲಿನ ಪ್ರಾಂತ್ಯಗಳನ್ನು ಆಳಿಸಿದ ಮಹಾನಾಡಪ್ರಭುಗಳಾಗಿದ್ದರು. ಮಧುಗಿರಿ ನಗರ ಮತ್ತು ಕೋಟೆಯನ್ನು ಕಟ್ಟಿದ್ದರು. ವಿಜಯನಗರದ ಅರಸರಿಂದ ಅನುಮತಿ ಪಡೆದು ಸೊನ್ನಲಿಗೆ ಅಥವಾ ಸೊನ್ನಲಾಪುರದಲ್ಲಿದ್ದ ಹಿಂದಿನ ನೊಳಂಬ ವಂಶದವರೂ ಕನ್ನಡಿಗರೂ ಆಗಿದ್ದ ವೀರಪ್ಪಗೌಡ, ಕಾಳಣ್ಣಗೌಡ, ಚನ್ನಪ್ಪಗೌಡ, ಕಾಳಚಿಕ್ಕಪ್ಪಗೌಡ, ರಾಮಪ್ಪಗೌಡ, ಹಿರಿಚಿಕ್ಕಪ್ಪಗೌಡನೆಂಬ ೭ ಜನ ಸಹೋದರರು ತಮ್ಮ ಸಾಹಸ ಗುಣಗಳಿಂದ ಪ್ರಖ್ಯಾತರಾಗಿದ್ದರು. ಇವರು ಸೊನ್ನಲಾಪುರದ ಶ್ರೀ ಸಿದ್ಧರಾಮೇಶ್ವರರ ಸಹೋದರರು ಅನುಗ್ರಹಕ್ಕೆ ಪಾತ್ರರಾಗಿ ನಾಗಮುರಿಯಂಬ ಆಯುಧವನ್ನು ಪಡೆದು ಆಶೀರ್ವಾದದೊಂದಿಗೆ ದಕ್ಷಿಣಕ್ಕೆ ಬಂದರು.[೫೮] ತಮ್ಮ ಪರಾಕ್ರಮದಿಂದ ವಿಜಯನಗರದ ಮೇಲೆ ದಾಳಿ ಮಾಡಿದ ದಿಲ್ಲಿಯ ಮುಲ್ಲಾಖಾನನ್ನು ಎದುರಿಸಿ ತಮ್ಮ ಸಾಹಸದಿಂದ ವಿಜಯನಗರದ ಅರಸರ ಕೃಪಾಕಟಾಕ್ಷಕ್ಕೆ ಪಾತ್ರರಾದರು. ವಿಜಯನಗರ ಅರಸರಿಂದ ತಾವು ಪಡೆದ ಉಂಬಳಿ ಭೂಮಿಯನ್ನು ಅಗೆಯುವಾಗ ದೊರೆತ ನೊಳಂಬೇಶ್ವರ ವಿಗ್ರಹ ಮತ್ತು ೭ ಕೊಪ್ಪರಿಗೆ ದ್ರವ್ಯದಿಂದ ಸಂತುಷ್ಟರಾದರು. ನಂತರ ಇವರು ನೊಳಂಬೇಶ್ವರ ದೇವಾಲಯ, ಲಕ್ಷ್ಮೀ ದೇವಾಲಯಗಳು ಕಟ್ಟಿ ಅನೇಕ ಜಲಾಶಯಗಳನ್ನು ನಿರ್ಮಿಸಿದರು. ಸಿದ್ಧಲಿಂಗಯತಿ ಮತ್ತು ಬಾಳೇಶ್ವರ ಸ್ವಾಮಿಗಳನ್ನು ತಮ್ಮ

ಗುರುವಾಗಿ ಸ್ವೀಕರಿಸಿ ವೀರಪ್ಪಗೌಡನ ನೇತೃತ್ವವನ್ನು ಒಪ್ಪಿಕೊಂಡರು. ಕೋರಾ, ತೆರೆಯೂರು, ಚೇಳೂರು, ಗುಬ್ಬಿ ಹೊಸಳ್ಳಿ, ಎಣ್ಣೆಗೆರೆ, ಬಿದರೆ, ಮಧುಗಿರಿ ಸ್ಥಳಗಳಲ್ಲಿ ೭ ನಾಡುಗಳನ್ನು ಕಟ್ಟಿದರು. ಈ ನಾಡ ಪ್ರಭುಗಳೆಲ್ಲರನ್ನು ಚಿಕ್ಕಪ್ಪಗೌಡರೆಂದು ಕರೆಡೆಯುವುದು ರೂಢನಾಮವಾಗಿತ್ತು. ಹಿರಿಯನಾದ ವೀರಪ್ಪಗೌಡನನ್ನು ಮಹಾನಾಡಪ್ರಭುವೆಂದು ಆತನ ಸೋದರರೆಲ್ಲರೂ ಒಪ್ಪಿಕೊಂಡರು.

ಈ ಏಳು ಜನ ಅಣ್ಣತಮ್ಮಂದಿರನ್ನು ಏಳುನಾಡ ಪ್ರಭುಗಳು ಎಂದು ಕರೆಯಲಾಗಿದೆ. ಕೋರಾದ ಅರಸು ಮನೆತನದವರು ಕೋರಾದಲ್ಲಿದ್ದು ಸುಮಾರು ೩೦ ಮನೆಗಳು ಇಂದು ನಿರ್ಮಾಣವಾಗಿವೆ. ಇವರ ಇತಿಹಾಸ ರಚನೆಗೆ ಯಾವುದೇ ಅಮೂಲ್ಯ ದಾಖಲೆಗಳು, ಹಸ್ತಪ್ರತಿಗಳು, ತಾಮ್ರಶಾಸನಗಳು ಲಭ್ಯವಿಲ್ಲ. ಇವರಲ್ಲಿ ಹಿರಿಯರೊಬ್ಬರು ಸುಮಾರು ೨೫ ವರ್ಷಗಳ ಹಿಂದೆ ತೆಗೆದುಕೊಂಡು ಹೋದ ಅವರಲಿನ್ಲ ಕಟ್ಟೆಮನೆ ಕಾಗದ ಪತ್ರಗಳು, 'ಶರಣಲೀಲಾಮೃತ'[೫೯] ಎಂಬ ಒಂದು ಕಟ್ಟನ್ನು ಬಿಟ್ಟರೆ ಇನ್ನೂ ಬೇರೆ ಯಾವ ಆಧಾರಗಳೂ ಇಲ್ಲವಾಗಿವೆ. ಇವರ ವಂಶಸ್ಥರು ಕೋರಾ ಪಕ್ಕದ ತರಿಯೂರಿನಲ್ಲಿ ಇದ್ದಾರೆ ಎಂದರೂ ಇದಕ್ಕೆ ಸರಿಯಾದ ದಾಖಲೆ ಇನ್ನೂ ದೊರೆತಿಲ್ಲ. ಇವರೆಲ್ಲರೂ ವ್ಯವಸಾಯದಲ್ಲಿ ಪರಿಣತಿ ಹೊಂದಿದವರಾಗಿದ್ದು ದಾಖಲೆಗಳ ಕೊರತೆ ಎದ್ದು ಕಾಣುತ್ತಿದ್ದು ಹಸ್ತಪ್ರತಿಗಳಲ್ಲಿ ಒಂದು ಮಾತ್ರ ಲಭ್ಯವಿದೆ. ಹಿಂದೆ ಒಂದು ಅಜ್ಜಿ ಇದ್ದು ಇದು ಯಾವಾಗಲೂ ಘೋಷಾ ಹಾಕಿಕೊಂಡು ಇರುತ್ತೆ. ಆ ಅಜ್ಜಿಗೆ ಪಟ್ಟ ಆಗಿತ್ತು ಎನ್ನುವ ಮಾಹಿತಿ ಲಭ್ಯವಾಗಿದೆ. ಇದಕ್ಕೆ ಆಧಾರವಾಗಿ ಅವರಲ್ಲಿ ಶಾನುಭೋಗರಾಗಿದ್ದ ಮನೆಯವರು ಒಂದು ಅಪರೂಪದ ಕಾಗದ ಸುರುಳಿ ಕಾದಿಟ್ಟಿದ್ದಾರೆ. ಅದು ಸುಮಾರು ೮ ಅಡಿ ಉದ್ದ ಇದೆ. ಅದರಲ್ಲೂ ಕೋರಾ ಮನೆತನದ ಉಲ್ಲೇಖ ಆದಿ ಮತ್ತು ಕೊನೆಯಲ್ಲಿ ಮಾತ್ರ ಲಭ್ಯವಿದೆ.[೬೦]

## ಹಸ್ತಪ್ರತಿ

ಈ ಹಸ್ತಪ್ರತಿ ಆರು ಇಂಚು ಅಗಲ, ೮–೯ ಅಡಿ ಉದ್ದ ಇದೆ. ರಾಗಿ ಮಸಿಯಲ್ಲಿ ಒರಟು ಕಾಗದದ ಮೇಲೆ ಬರೆದಿರುವ ಈ ದಾಖಲೆಯನ್ನು ವಂಶಸ್ಥರು 'ರಾಯರೇಖೆ' ಎಂದು ಕರೆಯುತ್ತಾರೆ.[೬೧] ಭಾವನಾಮ ಸಂವತ್ಸರದ ಪುಷ್ಯ ಶ್ರೀಮನ್ಮಹಾ ಏಳುನಾಡ ಪ್ರಭು ಕೋರಾದ ಚಿಕ್ಕವೀರಪ್ಪನ ರುಜುವು ದೊಡ್ಡವೀರಪ್ಪಾಜಿ ಅರಸು ಬರೆದ ಶುಭಮಸ್ತು ಕಡೆಯಲ್ಲಿ ಸೊನ್ನಲಾಪುರದ ಗುರುಸಿದ್ಧರಾಮೇಶ್ವರ ಸ್ವಾಮಿ ಪ್ರಸನ್ನ ಎಂದಿದೆ. ಶ್ರೀ ಮನ್ಮಹಾ ಏಳುನಾಡ ಪ್ರಭುಗಳು ಕೋರಾದ ಮುಮ್ಮಡಿಯವರ ವಂಶಾವಳಿಗಳು ಎಂದು ಪ್ರಾರಂಭವಾಗಿದೆ.[೬೨]

ಈ ಶಿಥಿಲವಾದ ಹಸ್ತಪ್ರತಿಯನ್ನು ಕ್ರಿ.ಶ. ೧೮೮೦ರಲ್ಲಿ ಮತ್ತೆ ಹೊಸದಾಗಿ ಬರೆದಿದ್ದಾರೆ. ಈ ಹಸ್ತಪ್ರತಿ ಬಹಳ ಉದ್ದವಿರುವುದರಿಂದ ಅನೇಕ ಸಾರಿ ಬಿಟ್ಟ ಮುಚ್ಚಿರುವದರಿಂದ ಸುಮಾರು ೧೦ ಅಂಗುಲ ಹಾಸಾಗಿದೆ.

ಕೋರಾದ ಅರಸು ಮನೆತನದವರು ಬಹಳ ಬೇಗ ಬಿಜ್ಜವಾರದ ಅರಸು ಮನೆತನದವರ ಜೊತೆ ಹೊಂದಿಕೊಂಡಿರಬೇಕು ಎಂಬುದು ಈ ಹಸ್ತಪ್ರತಿಯಿಂದ ತಿಳಿದುಬರುತ್ತದೆ. "ಶುಭಮಸ್ತು" ಸೊನ್ನಲಾಪುರದ ಸಿದ್ಧರಾಮೇಶ್ವರ ಸ್ವಾಮಿ ಶ್ರೀಮನ್ಮಹಾ ಏಳುನಾಡಪ್ರಭುಗಳು ಕೋರಾದ ವಂಶಗಳು ಸೊನ್ನಲಾಪುರದ ಶ್ರೀ

ಘಳಿಸುತ್ತು ತಾವು ದಯಮಾಡಿಸುವಂತಹ ವ್ಯಾಳೆಯಲ್ಲಿ ನಮ್ಮ ಸನ್ನಿಧಾನದಲ್ಲಿ ಇದ್ದಂಥ ವೀರೇಗೌಡರು ಮುಂತಾದ ಏಳು ಮಂದಿ ಅಣ್ಣತಮ್ಮಂದಿರಿಗೆ ಅಪ್ಪಣೆ ಕೊಟ್ಟ ವಿವರ ಎಂದು ಪ್ರಾರಂಭವಾಗುವ ಈ ಹಸ್ತಪ್ರತಿ ಒಟ್ಟು ೨೩ ಪುಟದಷ್ಟು ಸಾಮಗ್ರಿ ಇರುವುದರಿಂದ ಇದರಲ್ಲಿ ಪ್ರಮುಖ ವಿಷಯಗಳೆಂದರೆ,

೧. ಉಳವಿ ಮನೆಗೆ ಬಸವಣ್ಣ ಬಂದಿರುವ ವಿಷಯ

೨. ನಾಗರಿಮುರಿಯೆಂಬ ಆಯುಧವನ್ನು ತೋಶಿಖಾನೆಯಲ್ಲಿ ಏಳುಬಂಡಿ ದ್ರವ್ಯವನ್ನು ತೆಗೆದುಕೊಂಡು ದಕ್ಷಿಣದೇಶದಲ್ಲಿ ವಿಜಯನಗರವೆಂಬ ಪಟ್ಟಣದಲ್ಲಿ ಶ್ರೀಮನ್ ನರಪತಿಗಳಾದಂಥ ತಿರುಮಲರಾಯರು ರಾಜ್ಯಪರಿಪಾಲನೆ ಮಾಡುತ್ತಾ ಇದ್ದರು. ಅವರ ಹತ್ತಿರ ಈ ಅಣ್ಣತಮ್ಮಂದಿರು ಉಳಿದಿರಬೇಕು.

**ದೇವಸ್ಥಾನಗಳ ವಿವರ**

| | | |
|---|---|---|
| ಈಶ್ವರ ದೇವಸ್ಥಾನ | – | ಪೂಜಾರಿ ನಂಜಯ್ಯ |
| ಬಸವನಕಟ್ಟೆ ದೇವಸ್ಥಾನ | – | ಪೂಜಾರಿ ಸೋಮಣ್ಣ |
| ಆಂಜನೇಯ ದೇವಸ್ಥಾನ | – | ಪೂಜಾರಿ ಸಾತಾಳಿ ಕಲೆಮಯ್ಯ |
| ಬಸಿದಿ | – | ಪೂಜಾರಿ ಪಂದಣ್ಣ |
| ಊರಿಶೀಲ ದೇವಸ್ಥಾನ | – | ಪೂಜಾರಿ ತೊಗಟರ ಬಾಲಯ್ಯ |
| ನೊಣಬೇಶ್ವರ ದೇವಸ್ಥಾನ | – | ಪೂಜಾರಿ ವೀರಣ್ಣ |
| ಯಜಮಾನ | – | ಮಾಲಿನಂಬಯ್ಯ |
| ಶಜ್ಜಿ | – | ಈರಪ್ಪ |

**ಕೈವಾಡರದರ ವಿವರ**

| | | |
|---|---|---|
| ಶಾನುಭೋಗ | – | ತಿಮ್ಮಯ್ಯ |
| ಕಮ್ಮಾರ | – | ಕುಂಬಾರ ತಿಮ್ಮಣ್ಣ |
| ಕೆಲಸಿಗರ | – | ಹೊಟ್ಟೆ ರಂಗ |
| ಅಗಸರ | – | ಕೋವಿಗಾ |
| ಉಪ್ಪಾರ | – | ತಿಮ್ಮ |
| ಚಲುವಾದಿ | – | ನಾಗ |
| ಮಾದಿಗರ | – | ಗಿಡ್ಡ |
| ಕುದುರ | – | ತಿಮ್ಮ |

**ಮನೆಗಳ ವಿವರ**

ಅರಮನೆ– ೧

ದಳವಾಯಿ ಮನೆ – ೧

ಜಲಗಾರ ಮನೆ – ೨

ಸುಣ್ಣಕಲ್ಲಿಗರ ಮನೆ – ೨

ವಿರಕ್ತ ಸಪ್ಪಿದೇವರ ಮಠ – ೧

ಬ್ರಾಹ್ಮಣರ ಮನೆ – ೧೦

ಬಣಜಿಗರ ಮನೆ – ೧೮

ವೈಯಂದರ ಮನೆ – ೧೫

ಕೋಮಿಟಿಗರು – ೧೦

ಜೋಕಿ ಕೋಮಟಿಗಳ ಮನೆ – ೩

ಸಾದರ ಮನೆ – ೨೦

ಕುಂಚಿಟಿಕ ಒಕ್ಕಲಿಗರ ಮನೆ – ೧೫

ಕಮ್ಮಾರ ಮನೆ – ೨

ಅಕ್ಕಸಾಲಿ – ೧

ಕುರುಬರ ಮನೆ – ೧೫

ತೊಗಟರ ಮನೆ – ೨೦

ಉಪ್ಪಾರ ಮನೆ – ೨೦

ಜಲಗಾರರ ಮನೆ – ೨

ಸಣ್ಣಕಲ್ಲರ ಮನೆ – ೨

ಉಪ್ಪಾರ ಮನೆ – ೧೦

ಅಗಸರ ಮನೆ – ೩

ಕೆಲಸಗಾರರ ಮನೆ – ೨

ಬಲಗೈನವರ ಮನೆ – ೧೦

ಎಡಗೈನವರ ಮನೆ – ೧೫

ಉಭಯ ಮನೆ/ಮಠ – ೨೮೪

**ಬಿಜವಾರದಲ್ಲಿ ಇರುವ ಒಕ್ಕಲುತನದ ಮನೆಗಳು**

ಅರಮನೆ – ೧

ದಳವಾಯಿ ರಾಜಪ್ಪನವರ ಮನೆ – ೧

ಬ್ರಾಹ್ಮಣರ ಮನೆ – ೨೦

ಬಣಜಿಗರ ಮನೆ – ೫೦

ಸಾದರ ಮನೆ – ೩೦

ಕುಂಚಿಟಿಗ ಒಕ್ಕಲಿಗರು – ೧೦

ಬೊಕ್ಕಸದ ಗೊಲ್ಲರ ಮನೆ – ೧೫

ತೆಲುಗರ ಮನೆ – ೧೫

ಜೈನರ ಮನೆ – ೮

ಕಂಚುಗಾರರ ಮನೆ – ೫

ರಜಪೂತರ ಮನೆ – ೨೦

ಮರಾಂಗರ ಮನೆ – ೧೫

ಗಾಣಿಗರ ಮನೆ – ೮

ರಂಗಾಲಿಯವರ ಪಾಳಿ – ೮

ದರ್ಜಿ – ೪

ಕಂಬಾರ –೫

ಇನ್ನೂ ಮುಂತಾದ ಮನೆಗಳ ಒಕ್ಕಲುತನದ ವಿವರಗಳನ್ನು ಈ ಹಸ್ತಪ್ರತಿಯಲ್ಲಿ ಕಾಣಬಹುದು.

ಮಹಾಸ್ವಾಮಿಗಳ ಕುದುರೆ, ಛತ್ರಿ, ಬಂಗಾರದ ಬಳೇ ತೋಡಾ ಮೋಹನ ಮಾಲೆ, ಪದಕ ಕಂಠೀಸರ ಗೋಧಿಸರಾ ಮೊದಲಾದವುಗಳನ್ನು ಅನೇಕ ವಸ್ತುಗಳನ್ನು ಮಾಡಿಕೊಟ್ಟು ೭ ಹಳ್ಳಿ ಜಹಗೀರು ಅನುಭವಸಿಕೊಂಡು ಬರುವುದು. ೭೭ ಪಾಳೆಗಾರರೂ ಸಹ ಅಪ್ಪಣೆ ಕೊಟ್ಟು ವಿಜಯನಗರಕ್ಕೆ ದಯಮಾಡಿಸಿದರು. 'ಸಂಪೂರ್ಣ ಮಂಗಳ ಮಹಾಶುಭಂ' ಎಂದು ಮುಕ್ತಾಯಗೊಳ್ಳುತ್ತದೆ.[೬೩]

## ಅಡಿ ಟಿಪ್ಪಣಿಗಳು

೧. ಟಿ.ಜಿ.ಚಂದ್ರಶೇಖರಪ್ಪ, ಸಮಗ್ರ ಭಾರತದ ಇತಿಹಾಸ, ಪು.೩೪
೨. ಟಿ.ಜಿ.ಚಂದ್ರಶೇಖರಪ್ಪ, ಪೂರ್ವೋಕ್ತ, ಪು.೩೫
೩. ಕವಿತಾ ಕೃಷ್ಣನ್ 'ಜಯಮಂಗಲಿ' ಸ್ಮರಣ ಸಂಚಿಕೆ, ಪು.೧೬
೪. ಶಿವತಾರಕ ಕೆ.ಟಿ., ತುಮಕೂರು ಜಿಲ್ಲೆಯ ಪ್ರಾಗಿತಿಹಾಸ ಕುರುಹುಗಳು ಸಾಂಸ್ಕೃತಿಕ ಅಧ್ಯಯನ, ಪು.೨೦೮
೫. ಅದೇ, ಪು.೨೦೯
೬. ಅದೇ, ಪು.೨೧೦
೭. ಅದೇ, ಪು.೨೧೦
೮. ಕೆ.ಟಿ.ಶಿವತಾಕರ ತುಮಕೂರು ಜಿ.ಪ್ರಹಳೇಶೂಯುಗ ಸಂಸ್ಕೃತಿ ಇತಿಹಾಸ ದರ್ಶನ ಸಂ.೧೧., ಪು.೧
೯. ಅದೇ, ಪು.೧
೧೦. ಶಿವತಾರಕ ಕೆ.ಪಿ., ಕರ್ನಾಟಕದ ಪುರಾತತ್ವ ನೆಲೆಗಳು, ಪು.೯೬
೧೧. ಅದೇ, ಪು.೭
೧೨. ಎಂ.ಶೇಷಾದ್ರಿ, ದಿ.ಸ್ಟೋನ್ ಯುನಿಂಗ್ ಕಲ್ಚರ್ ಆಫ್ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರು, ಪು.೮೮
೧೩. ಅದೇ, ೮
೧೪. ಡಾ. ಆರ್.ಗೋಪಾಲ್, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೮
೧೫. ಕವಿತ ಕೃಷ್ಣನ್, ಪೂರ್ವೋಕ್ತ, ಪು.೧೪
೧೬. ಅದೇ, ಪು.೧೪
೧೭. ಅದೇ, ಪು.೧೪
೧೮. ಇತಿಹಾಸ ದರ್ಶನ, ಸಂ.೧೫-೨೦೦, ಪು.೨
೧೯. ಅದೇ, ಪು.೨
೨೦. ಅದೇ, ಪು.೨
೨೧. ಅದೇ, ಪು.೩
೨೨. ಅದೇ, ಪು.೩
೨೩. ಕವಿತಾ ಕೃಷ್ಣನ್, ಪೂರ್ವೋಕ್ತ, ಪು.೧೪
೨೪. ಅದೇ, ಪು.೧೫
೨೫. ಅದೇ, ಪು.೧೫

# ಅಧ್ಯಾಯ – ನಾಲ್ಕು : ಕಲೆ ಮತ್ತು ವಾಸ್ತುಶಿಲ್ಪ

೪.೧ ದೇವಾಲಯ ವಾಸ್ತುಶಿಲ್ಪ

೪.೨ ಮೂರ್ತಿಶಿಲ್ಪ

೪.೩ ವೀರಗಲ್ಲುಗಳು

೪.೪ ಶಾಸನಗಳು

# ಅಧ್ಯಾಯ – ನಾಲ್ಕು

# ಕಲೆ ಮತ್ತು ವಾಸ್ತುಶಿಲ್ಪ

## ೪.೧ ದೇವಾಲಯ ವಾಸ್ತುಶಿಲ್ಪ

"ಅಮಾರ್ತ್ಯಶ್ಚೈವ ಮರ್ತ್ಯಾಶ್ವಯತ್ರಯತ್ರ
ವಸಂತಿ ಹಿತದ್ವಸ್ತು ಇತಿಮತಃ"

ಎಂಬ ಮಯಮತ ಗ್ರಂಥದ ಈ ವೇದವಾಕ್ಯವು ವಾಸ್ತುಕಲೆಯನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು, ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಾಸ್ತು ಎಂದು ಹೆಸರು. ವಾಸ್ತುವನ್ನು ಆಶ್ರಯಿಸಿದ ಶಿಲ್ಪವೇ ವಾಸ್ತು ಎಂದೆನಿಸಲ್ಪಡುವುದು.

ಮಾನವನ ತನ್ನ ಅನುಭವ ಮತ್ತು ಮನೋಧರ್ಮವನ್ನು ಅಭಿವ್ಯಕ್ತಗೊಳಿಸಲು ಪ್ರಯತ್ನಿಸಿದನು. ಈ ರೀತಿ ಅಭಿವ್ಯಕ್ತಗೊಳಿಸುವ ಪ್ರಕ್ರಿಯೆಯನ್ನು ಕಲೆ ಎಂದು ಕರೆಯಲಾಗಿದೆ. ಶಿಲೆಯನ್ನು ಬಳಸಿಕೊಂಡು ಭೂಮಿಯ ಬಳಕೆಯೊಂದಿಗೆ ಹೊರಹೊಮ್ಮಿಸುವ ಕಲೆಯನ್ನು ವಾಸ್ತುಶಿಲ್ಪಕಲೆ ಎಂದು ಕರೆಯುತ್ತಾರೆ.[೧]

ಭೂಮಿಯನ್ನು ಒಂದು ವಸ್ತುವೆಂದು ಪರಿಗಣಿಸಿ ಅದರ ಮೇಲೆ ಕಟ್ಟಲ್ಪಟ್ಟ ಗೃಹ, ಗುಡಿ, ಮುಂತಾದವುಗಳನ್ನು ವಾಸ್ತುವೆಂದು ಕರೆಯಲಾಗಿದೆ. ಭೂಮಿಯ ಮೇಲೆ ಕಟ್ಟಲ್ಪಟ್ಟ ಕಟ್ಟಡಗಳಂತೆಯೇ ಕಟ್ಟಡದ ನಕ್ಷೆಗಳು, ಅಳತೆಗಳು, ಕಟ್ಟಡದ ನಕ್ಷೆಯನ್ನೊಳಗೊಂಡ ಭೂಮಿ, ವಸತಿ ಗೃಹಗಳೂ ಸಹ ವಾಸ್ತುಗಳೇ. ವಿಶಾಲವಾದ ಅರ್ಥದಲ್ಲಿ ವಾಸ್ತುವೆಂಬುದು ಭೂಮಿ ಕಟ್ಟಡ ವಾಹನ ಹಾಗೂ ಪರ್ಯಂಕಗಳನ್ನೊಳಗೊಂಡಿದೆ. ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಗರುಡ ಪುರಾಣದಲ್ಲಿ ಹೇಳಿದೆ.[೨]

"ಅವಾಸವಾಸವೇಶ್ಮಾದ್ ಪುರೇ ಗ್ರಾಮೇ ವಣಿಕ್ಪಥೇ
ಪ್ರಸಾದಾರಾಮದುರ್ಗೇಷು ದೇವಾಲಯ ಮಠೇಷು ಚ"[೩]

ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಮರ ಹಾಗೂ ಕಲ್ಲುಗಳನ್ನು ಸಹ ವಿಶ್ವಕರ್ಮ ವಾಸ್ತುಶಾಸ್ತ್ರದಲ್ಲಿ ವಾಸ್ತುಗಳೆಂದೇ ಕರೆದಿದೆ.[೪] ವಾಸ್ತುಶಿಲ್ಪ ಎಂಬ ಪದವು ವಿಶಾಲವಾದ ಅರ್ಥ ವ್ಯಾಪ್ತಿ ಹೊಂದಿದ್ದರೂ ಅದನ್ನು ಸಾಮಾನ್ಯವಾಗಿ ದೇವಾಲಯಗಳಿಗೆ ಮಾತ್ರ ಸ್ಪಷ್ಟವಾದ ವಾಸ್ತುಶಿಲ್ಪದ ಅರ್ಥ ನೀಡುವುದು. ಗಟ್ಟಿಯಾದ ವಸ್ತುವಿನಿಂದ ವಾಸ್ತುವಿನ ಮೇಲೆ ರಚನೆಗೊಂಡ ಎಲ್ಲಾ ವಾಸಯೋಗ್ಯರಚನೆಗಳೂ ಸಹ ವಾಸ್ತು ರಚನೆಯ ಪರಿಮಿತಿಗೆ ಒಳಪಡುತ್ತವೆ. ಈ ರೀತಿಯ ವಾಸ್ತು ರಚನೆಗಳು ಮಾನವನ ನಾಗರೀಕತೆಯ ಮಾನದಂಡ ಎಂದು ಹೇಳಿದರೆ ತಪ್ಪಾಗಲಾರದು. ಕಾಲಾಂತರದಲ್ಲಿ ಮಾನವನ ಬೌದ್ಧಿಕ

ವಿಕಸನದ ರೀತಿಯ ಖಚಿತತೆಯಿಂದ ಪ್ರತ್ಯಕ್ಷ ಸಾಕ್ಷಿಗಳೆಂದು ಹೇಳಬಹುದು. ದೇವಾಲಯದ ಅನುಕೂಲಕ್ಕಾಗಿ ಸ್ಥಳವನ್ನು ಆಯ್ಕೆಮಾಡಿಕೊಂಡಿರುವುದೇ ವಾಸ್ತುರಚನೆಯಾಗಿದೆ.[೫]

ವಾಸ್ತು ಎಂಬ ಪರಿಕಲ್ಪನೆಯು "ಗಂಧಾಯುರ್ವೇದದ" ಉಪವೇದದಿಂದಲೂ ಒಡಮೂಡಿದುದಾಗಿದೆ. ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚ್, ಕೆರೆ, ಕಟ್ಟೆ, ಕೋಟೆ ಹಾಗೂ ಮನೆಗಳಂತಹ ಎಲ್ಲಾ ರಚನೆಗಳು ವಾಸ್ತುಶಿಲ್ಪಗಳೇ ಆಗಿವೆ.[೬] ಶುಕ್ರನ ನೀತಿಸಾರ ಗ್ರಂಥವು ದೇವಾಲಯ, ಅರಮನೆ, ದೇವತಾ ಮೂರ್ತಿಗಳ ರಚನೆ, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ, ಮುಂತಾದವುಗಳನ್ನು ವಾಸ್ತುಶಿಲ್ಪ ಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ.[೭] ವಾಸ್ತುಶಿಲ್ಪಗಳು ಅವಳಿ ಜವಳಿ ಸೋದರಿಗಳಿದ್ದಂತೆ. ವಾಸ್ತುವಿನ ಜೊತೆ ಜೊತೆಯಲ್ಲಿಯೇ ಶಿಲ್ಪವು ತನ್ನ ವೈಶಿಷ್ಟ್ಯತೆಯನ್ನು ಗುರುತಿಸಿಕೊಂಡಿರುವುದನ್ನು ಕಾಣಬಹುದು. ವಾಸ್ತು ಮತ್ತು ಶಿಲ್ಪಗಳೆರಡೂ ಕಲಾ ಸೌಂದರ್ಯದ ಪ್ರೌಢಿಮೆಗೆ ಕೈದೀವಿಗೆಗಳಿದ್ದಂತೆ.

ಕಟ್ಟಡಗಳಲ್ಲಿ ಹಲವು ಬಗೆಗಳಿವೆ ಪ್ರಸಾದ ಮಂಟಪ, ಸಭಾ, ಶಾಲಾ, ಪ್ರಿಪಾ ಮತ್ತು ವಾಹನ (ಯಾನ)ಗಳಲ್ಲಿ ಅಧಿಕ ಸ್ಕಂದನ, ಶಿಬಿಕಾ, ರಥ ಎಂದು ನಾಲ್ಕು ವಿಧ ಪರ್ಯಂಕಗಳು ಆರು ಪಂಜರ, ಮಂಚಲೀ, ಮಂಚ, ಕಷ್ಟ, ಫಲಕಾಸನ ಮತ್ತು ಬಾಲ ಪರ್ಯಂಕ.[೮] ವಾಸ್ತು ಶಾಸ್ತ್ರವೆಂದರೆ ಇಂತಹ ಕಟ್ಟಡಗಳಿಗೆ ನಕ್ಷೆಗಳಿಗೆ ಸಂಬಂಧಿಸಿದ ಶಾಸ್ತ್ರ.[೯] ಶುಕ್ರನೀತಿಯಲ್ಲಿ ಈ ಶಾಸ್ತ್ರವನ್ನು ಅರಮನೆಗಳ, ರೇವುಗಳ, ಮನೆಗಳ, ಕಾಲುವೆಗಳ, ವಿಗ್ರಹಗಳ ರಚನೆಗೆ ಸಂಬಂಧಿಸಿದ ಶಾಸ್ತ್ರವೆಂದೇ ಕರೆಯಲಾಗಿದೆ.[೧೦]

ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಮಾನಸಾರ ಗ್ರಂಥವು ಸಂಪೂರ್ಣ ವಿವರಣೆಯನ್ನು ನೀಡುತ್ತದೆ. ಪ್ರತಿ ಅಧ್ಯಾಯದಲ್ಲೂ ದೇವಾಲಯದ ನಿರ್ಮಾಣದ ಉದ್ದೇಶ, ಶಿಲ್ಪಕ್ಕೆ ಇರಬೇಕಾದ ಅರ್ಹತೆಗಳು, ದೇವಾಲಯ ನಿರ್ಮಾಣಕ್ಕಿರುವ ಯೋಗ್ಯಸ್ಥಳ, ದೇವಾಲಯಗಳನ್ನು ಯಾವ ಭಾಗದಲ್ಲಿ ಮತ್ತು ಯಾವ ದಿಕ್ಕಿನಲ್ಲಿ ಕಟ್ಟಬೇಕು, ಸ್ಥಳ, ವಿನ್ಯಾಸ, ಅದಿಷ್ಠಾನ, ಶಿಖರ, ಮುಖ್ಯ ದೇವರ ಪ್ರತಿಷ್ಠಾಪನೆ, ಪರಿವಾರ ದೇವತೆಗಳ ಪ್ರತಿಷ್ಠಾಪನೆ ಇನ್ನೂ ಮುಂತಾದ ವಿವರಗಳನ್ನು ತಿಳಿಸುತ್ತದೆ.[೧೧]

ವಾಸ್ತುಶಿಲ್ಪ ಅಥವಾ ವಾಸ್ತುಶಾಸ್ತ್ರ ಎಂಬುದು ಪ್ರಾಚೀನ ಶಾಸ್ತ್ರಗಳಲ್ಲಿ ಒಂದಾಗಿದೆ. ಇದಕ್ಕೆ ಸಂಬಂಧಿಸಿದ ಪ್ರಾಚೀನ ಗ್ರಂಥವೆಂದರೆ ಸುಮಾರು ಕ್ರಿ.ಶ. ೬ನೇ ಶತಮಾನದ ಮಧ್ಯಭಾಗದಲ್ಲಿ ವರಾಹಮಿಹಿರನು ಕ್ರೂಢೀಕರಿಸಿದ ಬೃಹತ್ಸಂಹಿತೆ.[೧೨] ಇದು ವಾಸ್ತುಶಿಲ್ಪದಲ್ಲಿ ಪ್ರಾಚಾರ್ಯರೆನಿಸಿದ ಮಯ, ವಿಶ್ವಕರ್ಮ, ಗರ್ಗ ಮತ್ತು ಮನುಗಳು ರಚಿಸಿದ ಪ್ರಮಾಣ ವಾಕ್ಯಗಳನ್ನೂ ಅವರ ಗ್ರಂಥಗಳ ಕಾಣಬಹುದು ಮತ್ತು ಸಾರಾಂಶಗಳನ್ನೊಳಗೊಂಡ ಗ್ರಂಥ ಭಂಡಾರವು ಆಗಿದೆ.[೧೩]

'ಯಮತ್' ಗ್ರಂಥವೂ ಮಾನಸಾರ ಕೃತಿಯಲ್ಲಿನ ವಿವರಗಳನ್ನು ಹೇಳುತ್ತಾ ಕಟ್ಟಡಗಳನ್ನು ಕಟ್ಟಲು ಪ್ರಾರಂಭಿಸಿದಾಗ ವಾಸ್ತು ಪುರುಷನನ್ನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ ವಿಧಿ ವಿಧಾನಗಳನ್ನು ತಿಳಿಸುತ್ತದೆ. ದೇವಾಲಯದ ಉಪಪೀಠ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಕಟ್ಟಡದ ಮೇಲ್ಛಾವಣಿ, ದೇವಾಲಯದ ಶಿಖರ ಪ್ರಾಕಾರ ಮಂಟಪಗಳು ಮುಂತಾದ ವಿವರಗಳನ್ನು ತಿಳಿಸುತ್ತಿದ್ದು ಈ ಗ್ರಂಥದ ಕರ್ತೃ 'ಮಯ' ಇರಬಹುದೆಂದು ಹೇಳಲಾಗುತ್ತದೆ.[೧೪]

ದೇವಾಲಯ ಎಂಬ ಪರಿಕಲ್ಪನೆಯು ವಿಶಿಷ್ಟವಾದುದು. ವಿಶ್ವದ ಎಲ್ಲಡೆಗಳಲ್ಲಿಯೂ ಅತೀ ಪ್ರಾಚೀನ ಶಿಲಾಯುಗದ ನಾಗರೀಕತೆಯಿಂದಲೂ ಭಯಮಿಶ್ರಿತ ಗೌರವವನ್ನು ನೋಡಬಹುದಾಗಿದೆ. ಮಾನವ ಬದುಕಿಗಾಗಿ ನಿರಂತರವಾಗಿ ಪ್ರಕೃತಿಯೊಡನೆ ಸೆಣಸಬೇಕಾಯಿತು. ಆಹಾರಕ್ಕಾಗಿ ಅಲೆದಾಡುವಾಗ ಪ್ರಾಣಿಗಳನ್ನು ಎದುರಿಸುವ ಪರಿಸ್ಥಿತಿ ಅವನು ಸದಾ ಜಾಗರೂಕನಾಗಿರುವಂತೆ ಮಾಡಿತು. ಅದರ ಜೊತೆಗೆ ಪರಿಸರದ ಪ್ರಕೃತಿ ಅವನಲ್ಲಿ ಭಯ, ಆಶ್ಚರ್ಯಗಳನ್ನುಂಟುಮಾಡಿದವು. ಮಳೆ, ಗುಡುಗು, ಸಿಡಿಲು, ಕಾಳ್ಗಿಚ್ಚುಗಳು ನಿಸರ್ಗ ನಿಯಮಗಳೆಂಬುದನ್ನರಿಯದ ಕಾರಣ ಅವನಲ್ಲಿ ಭೀತಿ ಮೂಡಿಸಿದವು. ನಿಸರ್ಗದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ ಅದ್ಭುತ ಶಕ್ತಿ – ದೇವರು ಇದೆ ಎಂದು ನಂಬಿದನು. ಜೊತೆ ಜೊತೆಗೆ ಆ ನಿಸರ್ಗದ ರಹಸ್ಯಗಳನ್ನು ಅರಿಯಲು ಕುತೂಹಲ ಉಂಟಾಯಿತು. ನಿಸರ್ಗ ಶಕ್ತಿಗಳನ್ನು 'ಆಶ್ಚರ್ಯವತ್ ಪಶ್ಯತಿ' ಎಂದು ಅರಿತು ಅಷ್ಟಕ್ಕೇ ನಿಲ್ಲದೇ ಅವು ಪವಿತ್ರ, ಪೂಜಾರ್ಹ ಎಂಬ ಭಾವನೆಯೂ ಉಂಟಾಯಿತು. ಈ ಶಕ್ತಿಯನ್ನು ಒಲಿಸಿಕೊಳ್ಳಬೇಕಾದರೆ ಅದನ್ನು ಆರಾಧಿಸಬೇಕು ಎಂದು ಭಾವಿಸಿದನು. ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಗಳ ಬೆಂಬಲ, ಆಶೀರ್ವಾದ, ಅವಶ್ಯ ಎಂದು ಭಾವಿಸಿದ. ಕಾರಣ ಆ ಶಕ್ತಿಗೆ ಒಂದು ರೂಪ ನೀಡಿ ಅದನ್ನು ಪ್ರತಿಮೆಯನ್ನಾಗಿಸಿ ಪೂಜಿಸುವ ಪದ್ಧತಿ ಆರಂಭವಾಯಿತು. ಬೇಟೆಗೆ ಹೋರಾಟಾಗ ತಾನು ಬೇಟೆಯಾಡಬೇಕೆಂದಿರುವ ಪ್ರಾಣಿಯ ಚಿತ್ರವೊಂದನ್ನು ರೇಖಿಸಿ ಅದಕ್ಕೆ ತನ್ನ ಆಯುಧ ತಗುಲಿದಂತೆ, ಅದು ಮರಣಹೊಂದಿದಂತೆ ತೋರಿಸತೊಡಗಿದನು. ಆ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನೆಳೆದು ಅದು ಪವಿತ್ರವೆಂದು ಭಾವಿಸಿದನು. ಕಾಲಾನಂತರ ಇಂತಹ ಚಿತ್ರಗಳಿಗೆ ಬದಲು ಪ್ರತಿಮೆಗಳನ್ನು ಮಾಡಿಕೊಂಡು ಅವುಗಳನ್ನು ಪವಿತ್ರವೆಂದೇ ಬಗೆಯಲಾದ ಸ್ಥಳವೊಂದರಲ್ಲಿಟ್ಟು ಪೂಜಿಸುವ ಪದ್ಧತಿ ಆರಂಭವಾಯಿತು. ಇಂತಹ ಸ್ಥಳಗಳಲ್ಲಿ ಇತರರು – ಯಾರೊಬ್ಬರೂ – ಸ್ವೇಚ್ಛೆಯಾಗಿ ಅಜಾಗರೂಕರಾಗಿ ಓಡಾಡುವುದನ್ನು ನಿಷೇಧಿಸಿದ. ನಂತರ ಅದಕ್ಕೆ ರಕ್ಷಣೆಯನ್ನು ಒದಗಿಸಲು ದೇವಾಲಯಗಳ ರಚನೆಯ ಹಿನ್ನಲೆಯನ್ನೂ ನಾವು ಕಾಣಬಹುದು.[೧೫]

ದೇವಾಲಯಗಳು ಚಾರಿತ್ರಿಕ ಹಿನ್ನಲೆಯಲ್ಲಿ ಪರಿಣಾಮಕಾರಿಯಾದ ಪುರಾತತ್ವ ಆಕರಗಳಾಗಿವೆ. ಇವುಗಳು ಮಾನವ ಬೆಳವಣಿಗೆಯ ಚರಿತ್ರೆ ಮತ್ತು ಅವನ ಕಾಲದ ವಿಭಿನ್ನ ಸಂಸ್ಕೃತಿ, ಭವ್ಯ ಪರಂಪರೆಯನ್ನು ಎತ್ತಿ ಹಿಡಿಯುತ್ತವೆ. ಮಾನವ ದೈವ ಇಹಪರ ವಾಸ್ತವಿಕ. ಆದರ್ಶ ಇವುಗಳ ಮಿಲನದ ಸಂಕೇತವೇ

ದೇವಾಲಯ. ಒಟ್ಟಿನಲ್ಲಿ ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಕನಾದ ದೇವನಿಂದ ಮುಕ್ತಿಪಡೆಯಲು ಸನ್ಮಾರ್ಗದಲ್ಲಿ ನಡೆಯುವಂತಾಗಲು ಅವನನ್ನು ಪ್ರಾರ್ಥಿಸುವ ಸ್ಥಳವೂ ದೇವಾಲಯವೇ ಆಗಿದೆ.

ದೇವಾಲಯಗಳ ಪ್ರಾಚೀನತೆಯನ್ನು ಕ್ರಿಪೂ.ದಿಂದಲೂ ಗುರುತಿಸಬಹುದಾದರೂ ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆದಿರಲಿಲ್ಲ. ಪ್ರಾಚೀನ ಮಾನವನಲ್ಲಿ ಬಹುಮಟ್ಟಿಗೆ ಕೌತುಕವನ್ನುಂಟುಮಾಡಿದುದು ಸಾವಿನ ನಂತರ ಜೀವನ ಪರಿಕಲ್ಪನೆಯಿಂದಾಗಿ ಸಮಾಧಿಗಳು ಪೂಜಾರ್ಹ ಸ್ಥಳಗಳಾದವು. ದೇವರು ಎಂಬ ಪರಿಕಲ್ಪನೆಯು ಪ್ರಪ್ರಥಮವಾಗಿ ಸಿಂಧೂ ನದಿಯ ನಾಗರೀಕತೆಯಲ್ಲಿ ಕಾಣುತ್ತೇವೆಯಾದರೂ ದೇವಾಲಯವನ್ನು ನಿರ್ಮಾಣ ಮಾಡಿ ಪೂಜೆ ಮಾಡುವ ಪದ್ಧತಿಯು ರೂಢಿಯಲ್ಲಿರಲಿಲ್ಲ. ಕ್ರಿಪೂ. ೩೦೦೦ಗಳಷ್ಟು ಹಳೆಯದಾದ ಸಿಂಧೂ ನಾಗರೀಕತೆಯಲ್ಲಿ ಸಾರ್ವತ್ರಿಕ ಕಟ್ಟಡಗಳಿಗೆ, ಮುದ್ರೆಗಳಿಗೆ ಹೆಚ್ಚಿನ ಆದ್ಯತೆ ಇದ್ದು ಮಹೆಂಜೋದಾರೋದಲ್ಲಿ ದೊರೆತ ನರ್ತಕಿಯ ವಿಗ್ರಹ, ಪುರೋಹಿತ ಮೂರ್ತಿ ಶಿಲ್ಪ, ಗೂಳಿ, ಪಶುಪತಿ ಮತ್ತು ಇನ್ನಿತರ ಚಿತ್ರಗಳು ಅವರ ಕಲಾಸಕ್ತಿಗೆ ನಿದರ್ಶನಗಳಾಗಿವೆ. ದೇವಾಲಯಗಳ ರಚನೆಗೂ ಪೂರ್ವದಲ್ಲಿ ಮೂರ್ತಿ ಶಿಲ್ಪದ ಬೆಳವಣಿಗೆ ಮತ್ತು ದೇವರ ಆರಾಧನೆ ಇತ್ತೆಂದು ಹೇಳಬಹುದು. ಮೂರ್ತಿ ಪೂಜೆ ಆರಂಭವಾದ ನಂತರದಲ್ಲಿ ರಕ್ಷಣೆಗಾಗಿ ವಾಸ್ತುರೂಪ ಪಡೆಯಿತು ಹೇಳಬಹುದು. ನಂತರದ ವಾಸ್ತುಶಿಲ್ಪದ ಬೆಳವಣಿಗೆಯನ್ನು ಗಮನಿಸಿದರೆ ಮಾನವನು ದೇವರ ಆರಾಧನೆಯಲ್ಲಿ ಹೊಸ ವಿಭಿನ್ನತೆಯನ್ನು ಕಂಡುಕೊಂಡಿದ್ದನ್ನು ಕಾಣಬಹುದು. ಬಿಹಾರದ ಬಾರಾಬರ್ ಬೆಟ್ಟಗಳಲ್ಲಿನ ಲೋಮಸ ಮತ್ತು ಸುಧಾಮ ಗುಹೆಗಳೆರಡರಲ್ಲೂ ಅವರ ನಿರ್ಮಾಣದ ವಾಸ್ತುಕೃತಿಗಳು ಮುಂದಿನ ಪೀಳಿಗೆಗೆ ಶಾಶ್ವತವಾಗಿರಲೆಂದೇ ನಿರ್ಮಾಣವಾದ ವಾಸ್ತು ಸೃಷ್ಟಿಗಳೆಂದೇ ಭಾವಿಸಬಹುದು.

ಭಾರತೀಯ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಕೀರ್ತಿ ಮೌರ್ಯ ಸಾಮ್ರಾಜ್ಯಕ್ಕೆ ಸಲ್ಲುತ್ತದೆ. ಅವರ ಅವಧಿಯಲ್ಲಿ ಬೌದ್ಧ ಧರ್ಮವು ಅತ್ಯಂತ ಪ್ರಬಲವಾದ ಧರ್ಮವಾಗಿ ಬೆಳಕಿಗೆ ಬಂದಿತು. ಇವರ ಕಾಲದ ಪ್ರಮುಖ ವಾಸ್ತುಶಿಲ್ಪದ ಪ್ರಯೋಗ ಸ್ಮಾರಕಗಳೆಂದರೆ ಸ್ತೂಪ ಮತ್ತು ಚೈತ್ಯಗಳು. ಸ್ತೂಪಗಳು ಬೃಹತ್ ಶಿಲಾ ಸಂಸ್ಕೃತಿಯ ಸಮಾಧಿಯ ಮುಂದುವರೆದ ಹಂತವಾಗಿರುವುದನ್ನು ಗುರುತಿಸಬಹುದು. ದಕ್ಷಿಣಭಾರತದಲ್ಲಿ ವೃತ್ತಾಕಾರದ ಈ ರೀತಿಯ ಸಮಾಧಿ ದಿಬ್ಬಗಳನ್ನು ಅವುಗಳ ಸುತ್ತಲೂ ಕಲ್ಲಿನಿಂದ ನಿರ್ಮಿತವಾದವುಗಳನ್ನು ಕಾಣಬಹುದು.[೧೬]

ಕಟ್ಟಡ ರೂಪದ ದೇವಾಲಯಗಳನ್ನು ನಿರ್ಮಿಸಲು ಕಲ್ಲನ್ನು ಸಂಪೂರ್ಣವಾಗಿ ಬಳಸಿದ್ದನ್ನು. ಗುಪ್ತರ ಕಾಲದಿಂದ ಗುರ್ತಿಸಬಹುದು. ಅಲ್ಲಿಯವರೆಗೂ ದೇವಾಲಯಗಳನ್ನು ಕಲ್ಲು, ಇಟ್ಟಿಗೆ ಮತ್ತು ಮಣ್ಣಿನಿಂದ ನಿರ್ಮಿಸುತ್ತಿದ್ದರು. ಇವರ ದೇವಾಲಯಗಳು ತನ್ನದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡು ಸರಳತೆ ಮತ್ತು ವಿರಳ ಸೌಂದರ್ಯಕ್ಕೆ ಹೆಸರುವಾಸಿಯಾಗಿವೆ. ಕ್ರಿ.ಶ. ೬ನೇ ಶತಮಾನದಿಂದ ಮೈಸೂರು ಒಡೆಯರವರೆಗಿನ

ಅವಧಿಯು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ನೀಡಿದ ಮತ್ತೊಂದು ಅಚ್ಚ ನಿದರ್ಶನಗಳಾಗಿರುವುದನ್ನು ಗುಪ್ತರ ವಾಸ್ತುಶಿಲ್ಪ ಮಾಧ್ಯಮ ಶೈಲಿಯ ಮುಂದುವರೆದ ರಚನೆಯನ್ನು ಬಾದಾಮಿ ಚಾಲುಕ್ಯರು ಮತ್ತು ದಕ್ಷಿಣಭಾರತದಲ್ಲಿ ಪಲ್ಲವರು ಮೊಟ್ಟ ಮೊದಲಬಾರಿಗೆ ರಚನಾತ್ಮಕ ದೇವಾಲಯಗಳನ್ನು ನಿರ್ಮಿಸಿದರು.[೧೭] ನಂತರ ರಾಷ್ಟ್ರಕೂಟ ಕಾಲದಲ್ಲಿ ಕಲೆ ಮತ್ತು ವಾಸ್ತು ಶಿಲ್ಪವು ನಿರ್ದಿಷ್ಟ ಸ್ವರೂಪವನ್ನು ಪಡೆಯಿತು. ವಾಸ್ತು ರಚನೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯದ ರಚನೆಯಲ್ಲಿ ಸೂಕ್ಷ್ಮ ಕೆತ್ತನೆ ಹಾಗೂ ಅತ್ಯಾಕರ್ಷಕವಾದ ಸೌಂದರ್ಯ ಸಹಜತೆ ಮತ್ತು ಅಲಂಕಾರಿಕೆಯ ಲಕ್ಷಣಗಳನ್ನು ಕಾಣುತ್ತೇವೆ.

ಹೊಯ್ಸಳರ ಕಾಲವು ದೇವಾಲಯಗಳ ಬೆಳವಣಿಗೆಯಲ್ಲಿ ಉನ್ನತ ಕಾಲಘಟ್ಟವೆಂದು ಗುರುತಿಸಬಹುದು. ಇವರ ಕಾಲದ ಕಲಾಶೈಲಿಯು "ಹೊಯ್ಸಳ ಶೈಲಿ"ಯೆಂದೇ ಪ್ರತ್ಯೇಕತೆಯನ್ನು ಕಾಯ್ದುಕೊಂಡಿತು.[೧೮] ನಂತರ ವಿಜಯನಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪಶೈಲಿಯು ದೇವಾಲಯ ವಾಸ್ತುಶಿಲ್ಪ ಪ್ರಪಂಚಕ್ಕೆ ನೀಡಿದ ಶ್ರೇಷ್ಠ ಕೊಡುಗೆಯೆಂದೇ ಗುರುತಿಸಲಾಗಿದೆ. ಈ ಆಳ್ವಿಕೆಯಿಂದ ಒಡಮೂಡಿದ ಕಲಾತ್ಮಕ 'ವಿಜಯನಗರ ಶೈಲಿ' ಹಾಗೂ ವಿಜಯನಗರೋತ್ತರ ಶೈಲಿಗಳೆಂಬುದಾಗಿ ವಿಂಗಡನೆಯಾಗಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ.[೧೯] ಕೋರಾ ಪರಿಸರದಲ್ಲಿ ಪಾಳೆಗಾರರ ಶೈಲಿಯಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣಬಹುದು.

ದೇವಾಲಯಗಳನ್ನು ಮಾನವನ ದೇಹದೊಂದಿಗೆ ಸಮೀಕರಿಸಲಾಗಿದೆ. ಪರಿಣಾಮ ದೇವಾಲಯದ ಕಟ್ಟಡದ ಹಲವಾರು ಭಾಗಗಳಿಗೆ ದೇಹದ ವಿವಿಧ ಅಂಗಗಳಾದ ಪಾದ, ಚರಣ, ಅಂಘ್ರ, ಜಂಘು, ಕಟಿ, ಕುಕ್ಷಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕ, ಮುಖ, ವಕ್ತ್ರ, ನಾಸಿಕ ಇತ್ಯಾದಿ ಹೆಸರುಗಳನ್ನು ಕೊಡಲಾಗಿದೆ.[೨೦] ದೇವಾಲಯದ ರಚನೆಯ ಮೊದಲು ವಾಸ್ತು (ನಿವೇಶನದ ಆಯ್ಕೆ) ಗುರುತಿಸುವುದರೊಂದಿಗೆ ಪ್ರಾರಂಭವಾಗಿ ತದನಂತರ ಇದು ದೇವಾಲಯ ವಾಸ್ತು ಶಿಲ್ಪವೆಂದೇ ಗುರುತಿಸಿಕೊಂಡಿರುವುದನ್ನು ಗಮನಿಸಬಹುದು. ಈ ನೆಲೆಗಟ್ಟಿನಲ್ಲಿ ನಿರ್ಮಾಣವಾದ ಹಲವಾರು ಪ್ರಾಚೀನ ಮತ್ತು ಮಧ್ಯಯುಗೀನ ಕಾಲದ ದೇವಾಲಯಗಳು ಕೋರಾ ಹೋಬಳಿ ಪರಿಸರದಲ್ಲಿ ಕಂಡುಬಂದಿದೆ. ಅವುಗಳ ವಿವರಣೆಯನ್ನು ಈ ಕೆಳಕಂಡಂತೆ ನೀಡಬಹುದಾಗಿದೆ.

## ಶೈವ ದೇವಾಲಯಗಳು

ದೇವಾಲಯಗಳ ಗರ್ಭಗುಡಿಯಲ್ಲಿ ಹೊಂದಿರುವ ಮೂಲ ದೇವತೆಗಳ ಆಧಾರದ ಮೇಲೆ ಶೈವ ದೇವಾಲಯಗಳನ್ನು ಗುರುತಿಸಬಹುದು. ಶೈವ ದೇವರ ಆರಾಧನೆಯನ್ನು ಪ್ರಾಚೀನ ಸಿಂಧೂ ನಾಗರೀಕತೆಯಿಂದಲೇ ಗುರುತಿಸಬಹುದು. ಈ ನಾಗರೀಕತೆಯ ನೆಲೆಗಳಲ್ಲಿ ದೊರೆತ ಶಿವಲಿಂಗ, ಪಶುಪತಿ ದೇವತೆ ಮೂರ್ತಿಗಳ ಶೈವ ಧರ್ಮದ ಕುರುಹುಗಳನ್ನು ಸ್ಪಷ್ಟಪಡಿಸುತ್ತವೆ. ವೈದಿಕ ಸಾಹಿತ್ಯದ ಮಂತ್ರಗಳಲ್ಲಿ

ಪ್ರಸ್ತಾಪಿತವಾದ ರುದ್ರ ಪಶುಪತಿ, ಶಿವ, ವೃಷಭ, ಮಾಧವ, ಶಪರ್ದಿನ್ ಮೊದಲಾದ ಶಬ್ದಗಳು ಮಹಾಕಾವ್ಯ ಪುರಾಣಗಳು ಮೊದಲಾದ ಸಾಹಿತ್ಯದಲ್ಲಿ ಪ್ರಸ್ತಾಪಿಸಿದ ವಿಚಾರಧಾರೆಗಳಿಂದ ಗುರುತಿಸಿದೆ.[೨೧] ಇದಲ್ಲದೇ ಈ ಧರ್ಮದ ಧಾರ್ಮಿಕ ನಿರ್ಮಾಣಗಳು ಶಾತವಾಹನ, ಇಕ್ಷ್ವಾಕು, ಅರಸ ಮನೆತನಗಳ ಆಳ್ವಿಕೆಯಿಂದೀಚೆಗೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಕನ್ನಡ ನಾಡಿನಲ್ಲಿ ನರಗುಂದ ತಾಲ್ಲೂಕಿನ ವಾಸನ ಮತ್ತು ಶಿಕಾರಿಪುರ ತಾಲ್ಲೂಕಿನ ಮಳವಳ್ಳಿಯಲ್ಲಿ ಕ್ರಿ.ಶ. ೩ನೇ ಶತಮಾನದ ಶಾಸನೋಕ್ತ ಶಿವದೇವಾಲಯಗಳ ಉಲ್ಲೇಖಗಳೇ ಅತ್ಯಂತ ಪ್ರಾಚೀನ ಶೈವ ದೇವಾಲಯಗಳಾಗಿವೆ.[೨೨] ನಂತರ ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ವಿಜಯನಗರದ ಅರಸರು, ಮಹಾಮಂಡಳೇಶ್ವರರು, ಮಹಾಸಾಮಂತರುಗಳ ಆಶ್ರಯ ಪ್ರೋತ್ಸಾಹದಿಂದ ಈ ಧರ್ಮದ ದೇವಾಲಯಗಳ ನಿರ್ಮಾಣ ಹಂತ ಹಂತವಾಗಿ ಬೆಳವಣಿಗೆ ಹೊಂದಿದವು.

ಪ್ರಸ್ತುತ ಕೋರಾ ಪರಿಸರದಲ್ಲಿ ಶೈವ ದೇವಾಲಯಗಳಿಗೆ ಸಂಬಂಧಿಸಿದ ದೇವಾಲಯಗಳು ಹೆಚ್ಚಾಗಿ ಚೌಕಾಕಾರವಾಗಿದ್ದು, ಈ ಪರಿಸರದಲ್ಲಿ ನಿರ್ಮಾಣವಾದ ಶೈವ ದೇವಾಲಯಗಳ ವಿವರಣೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಹೆಸರು : ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯ

ಸ್ಥಳ : ಚಿಕ್ಕತೊಟ್ಲುಕೆರೆಯ ಊರಿನ ಹೊರಭಾಗದಲ್ಲಿ

ಕಾಲ : ೧೬ – ೧೭

ರಾಜವಂಶ : ಪಾಳೇಗಾರರು

ದಿಕ್ಕು : ಪಶ್ಚಿಮಾಭಿಮುಖ

ವಸ್ತು : ಕಣಶಿಲೆ

ಕೋರಾ ಪರಿಸರದಿಂದ ೧೦ ಕಿ.ಮೀ. ದೂರದಲ್ಲಿರುವ ಚಿಕ್ಕತೊಟ್ಲುಕೆರೆಯ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯವು ಪ್ರಾಚೀನತೆಯನ್ನು ಹೊಂದಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಗರ್ಭಗುಡಿ, ನವರಂಗವನ್ನು ಹೊಂದಿದೆ. ದೇವಾಲಯ ೨ ಗರುಡಗಂಭಗಳನ್ನು ಹೊಂದಿದೆ. ಗರ್ಭಗುಡಿಯ ಗರುಡಗಂಬ ೯ ಅಡಿ ಎತ್ತರವಿದ್ದು ನವರಂಗದಲ್ಲಿ ೨ ಕಂಬಗಳಿವೆ. ದೇವಾಲಯದ ಎದುರಿನಲ್ಲಿ ೩೦ ಅಡಿ ಎತ್ತರದ ಗರುಡಗಂಬವಿದೆ. ಅದರಲ್ಲಿ ಆಂಜನೇಯ, ಶಂಖ, ಚಕ್ರ, ಗದೆಗಳನ್ನು ಕೆತ್ತಿರುವುದು ವಿಶೇಷ. ದೇವಾಲಯದ ಆವರಣದ ನೈರುತ್ಯದಲ್ಲಿ ೩೦ ವರ್ಷಗಳಷ್ಟು ಹಳೆಯದಾದ ಬನ್ನಿಮರವಿದ್ದು, ಎಡಭಾಗದಲ್ಲಿ ಧಾರೆ ಮಂಟಪವಿದ್ದು, ಎದುರಿಗೆ ಯೋಗ ಶಾಲೆಗಳಿವೆ.

ಹೆಸರು : ಶ್ರೀರಾಮೇಶ್ವರ ದೇವಾಲಯ

ಸ್ಥಳ : ಅಹೋಬಲ ಅಗ್ರಹಾರದ ಊರಿನ ಒಳಗೆ

ಕಾಲ : ಚೋಳರ ಕಾಲ

ದಿಕ್ಕು : ಪೂರ್ವಾಭಿಮುಖ

ರಾಜವಂಶ : ಚೋಳರು

ವಸ್ತು : ಕಣಶಿಲೆ

ಈ ದೇವಾಲಯದ ಉದ್ದ ೧೧.೮೦ ಥ ೧೦ ಮೀ. ದೇವಾಲಯವು ಗರ್ಭಗುಡಿ ಮತ್ತು ಮುಖಮಂಟಪ ಒಳಗೊಂಡಿದೆ. ಗರ್ಭಗೃಹದಲ್ಲಿ ರಾಮ, ಲಕ್ಷ್ಮಣ, ಸೀತೆಯರ ಮೂರ್ತಿ ಶಿಲ್ಪಗಳಿವೆ. ಜೊತೆಗೆ ೨ ಅಡಿ ಎತ್ತರದ ಲಿಂಗವಿದೆ. ಪಕ್ಕದಲ್ಲಿ ಪಾರ್ವತಿ ದೇವಿಯ ಮೂರ್ತಿ. ಗರ್ಭಗೃಹದ ಮೇಲ್ಛಾವಣಿ ಚತುರ್ಭುಜಾಕೃತಿಯಲ್ಲಿದೆ. ಗರ್ಭಗೃಹದ ಪ್ರವೇಶದ್ವಾರ ಸಪಾಟಾಗಿದ್ದು ಅಲಂಕಾರತೆಗೆ ಹೆಚ್ಚು ಪ್ರಾಧಾನ್ಯತೆ ನೀಡಿಲ್ಲ. ಮುಖ ಮಂಟಪದಲ್ಲಿ ಎರಡೂ ಪೂರ್ಣ ಕಂಬಗಳು ೨ ಅರ್ಧಕಂಬಗಳಿವೆ. ಈ ಕಂಬಗಳು ಸರಳತೆಯಿಂದ ಕೂಡಿವೆ. ದೇವಾಲಯದ ಮುಂದೆ ನಂದಿ ವಿಗ್ರಹವಿದೆ. ದೇವಾಲಯದ ಹೊರಭಾಗ ಅದಿಷ್ಠಾನವಿದ್ದು ಗರ್ಭಗೃಹದ ಬಲ ಮತ್ತು ಎಡಭಾಗದ ಹೊರಗೋಡೆಯ ಮೇಲೆ ಎರಡು ಮೀನಿನ ಉಬ್ಬುಚಿತ್ರಗಳಿವೆ. ೨೦೦೩ರಲ್ಲಿ ದೇವಾಲಯದ ಒಳಭಾಗವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ.

ಹೆಸರು : ವೀರಭದ್ರೇಶ್ವರ ದೇವಾಲಯ

ಸ್ಥಳ : ಕೆಸ್ತೂರಿನ ಹೊರವಲಯದಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಚೋಳರು

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಪಾಯವಿಲ್ಲದೇ ನಿರ್ಮಾಣವಾಗಿದೆ. ಪೂರ್ವ ಮತ್ತು ಉತ್ತರದಿಕ್ಕಿನಿಂದ ಪ್ರವೇಶದ್ವಾರವಿದೆ. ಹೊರಗೋಡೆಯನ್ನು ದಪ್ಪವಾದ ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಇದು ಅಷ್ಟಕೋನಗಳಿಂದ ರಚನೆಯಾಗಿದೆ. ನಾಲ್ಕು ಮೂಲೆಗಳಲ್ಲಿ ಕಂಬಗಳಿಂದ ಕೂಡಿದ್ದು ಕೋಣೆಯಂತೆ ನಿರ್ಮಾಣವಾಗಿದೆ. ಕಂಬಗಳಲ್ಲಿ ಸಿಂಹ ಲಾಲನೆಗಳನ್ನು ಕಾಣಬಹುದು. ಸಿಂಹದ ಕೇಶರಾಶಿಯನ್ನು ತುಂಬಾ ಅಲಂಕಾರವಾಗಿ ಕೆತ್ತಲಾಗಿದೆ. ದೇವಾಲಯದ ಪ್ರಾಂಗಣವು ತುಂಬಾ ವಿಶಾಲವಾಗಿದ್ದು, ಸುಮಾರು ೧೫ ಅಡಿಗಳಷ್ಟು ಎತ್ತರವಾಗಿದೆ. ಮೊದಲ ಮೂರು ಕಂಬಗಳಲ್ಲಿ ಸುಂದರವಾದ ವಿಗ್ರಹಗಳನ್ನು ಕೆತ್ತಲಾಗಿದೆ. ಮೊದಲ ಕಂಬದಲ್ಲಿ ೩ ತಲೆಯುಳ್ಳ ಬ್ರಹ್ಮದೇವರನ್ನು ಸುಂದರವಾಗಿ ಕೆತ್ತಿದೆ. ನಾಲ್ಕು ಕೈಗಳಿದ್ದು ಮುಂದಿನ ಎರಡು ಕೈಗಳಲ್ಲಿ ಶಂಖುವಾದ್ಯವನ್ನು ಹಿಡಿದು ನಿಂತಿರುವ ಭಂಗಿಯು ತುಂಬಾ ಆಕರ್ಷಕವಾಗಿದೆ.

ನವರಂಗದ ಸುಖಾಸೀನದಲ್ಲಿ ಮೂರು ಹೆಣ್ಣಿನ ಮೂರ್ತಿಶಿಲ್ಪಗಳನ್ನು ಕೆತ್ತಲಾಗಿದೆ. ಈ ಮೂರು ವಿಗ್ರಹಗಳಿಗೂ ಒಂದೊಂದು ದಿಕ್ಕಿಗೊಂದು ಹೆಣ್ಣಿನ ಚಿತ್ರವನ್ನು ಕೆತ್ತಲಾಗಿದೆ. ೩ ಶಿಲ್ಪಗಳಿಗೂ ನಾಲ್ಕು ಕೈಗಳು ನಾಲ್ಕು ಕಾಲುಗಳನ್ನು ಕೆತ್ತನೆ ಮಾಡಲಾಗಿದ್ದು, ಒಂದು ಹೆಣ್ಣಿನ ಶಿಲ್ಪವು ಪೂರ್ಣ ನಗ್ನವಾಗಿದೆ.

ಬ್ರಹ್ಮದೇವ ಶಿಲ್ಪದ ಮುಖದಲ್ಲಿ ದಾಡಿಯ ಕೆತ್ತನೆಗೆ ಒಳಪಟ್ಟಿದೆ. ಅದೇ ಕಂಬದ ಎಡಭಾಗದಲ್ಲಿ ನಂದಿಯನ್ನು ಕೆತ್ತಲಾಗಿದೆ. ಈ ನಂದಿಯು ಮೃದಂಗವನ್ನು ಬಾರಿಸುವಂತಿದೆ. ನಂದಿ ವಿಗ್ರಹದ ಮೊಗವು ತುಂಬಾ ಸುಂದರವಾಗಿದ್ದು ಕಾಲಿಗೆ ಕಾಲಂದಿಗೆ ಆಭರಣಗಳನ್ನು ತೊಡಿಸಿದಂತೆ ಕೆತ್ತಲಾಗಿದೆ. ಹಾಗೆಯೇ ಅದರ ಮುಂದೆ ಪರಶುರಾಮ ವಿಗ್ರಹವಿದೆ. ಪರಶುರಾಮನ ಕೈಯಲ್ಲಿ ಕೊಡಲಿಯನ್ನು ಹೆಗಲ ಮೇಲೆ ಇಟ್ಟುಕೊಂಡಿದೆ. ಪಕ್ಕದ ನಟರಾಜ ಶಿಲ್ಪವಿದ್ದು ನೃತ್ಯರೂಪದಲ್ಲಿದ್ದು ಕಾಲ ಕೆಳಗಡೆ ಒಬ್ಬ ರಾಕ್ಷಸನನ್ನು ತುಳಿಯುವಂತಿದೆ. ಹಾಗೆಯೇ ಅದರ ಪಕ್ಕದ ಕಂಬದಲ್ಲಿ ಅಂದರೆ ಹೆಬ್ಬಾಗಿಲಿನ ಮುಂದಿನ ಕಂಬದಲ್ಲಿ ನಂದೀಶ ಮತ್ತು ಭೃಂಗೀಶನ ವಿಗ್ರಹಗಳು ಬಾಗಿಲಿನ ಎರಡೂ ಕಂಬದಲ್ಲಿ ಕೆತ್ತನೆ ಮಾಡಲಾಗಿದ್ದು. ಈ ವಿಗ್ರಹಗಳು ಸುಮಾರು ೩ ಅಡಿ ಎತ್ತರವಿದ್ದು ಒಂದು ಕೈಯಲ್ಲಿ ಗದೆಯನ್ನು ಹಿಡಿದು ನಿಂತಿದೆ.

ದೇಗುಲದ ಎಡಭಾಗ ಪ್ರಾಂಗಣದಲ್ಲಿ ಮೊದಲ ಕಂಬವು ೧೨ ಅಡಿ ಎತ್ತರವಿದ್ದು ಅದರ ಮಗ್ಗುಲಲ್ಲಿನ ಚಿಕ್ಕ ಕಂಬವು ಪಕ್ಕದಲ್ಲಿರುವ ಬೃಹದಾಕಾರದ ಕಂಬಕ್ಕೆ ಹೊಂದಿಕೊಂಡಂತೆ ಅದರ ಮೇಲ್ಭಾಗದಲ್ಲಿ ನವಿಲು ಮಧ್ಯಭಾಗದಲ್ಲಿ ನಂದಿ ಉಬ್ಬುಶಿಲ್ಪವನ್ನು ಕಾಣಬಹುದು. ಅಂದರೆ ಇಲ್ಲಿನ ಪ್ರತಿಯೊಂದು ಕಂಬವೂ ಒಂದು ಮತ್ತೊಂದರಂತಿಲ್ಲ, ವಿಶೇಷತೆಯಿಂದ ಕೂಡಿದೆ. ಈ ಕಂಬಗಳ ಕೆತ್ತನೆಯನ್ನು ಡಕಣಾಚಾರಿ ಕೆತ್ತನೆ ಮಾಡಲಾಗಿದೆ ಎಂದು ಪ್ರತೀತಿ ಇದೆ. ಎಡಭಾಗದ ಕಂಬದಲ್ಲಿ ತಬಲವಾದ್ಯ ನುಡಿಸುವ ಮೂರ್ತಿ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ.

ಈ ದೇವಾಲಯವು ಎರಡು ಮಹಾದ್ವಾರಗಳನ್ನು ಹೊಂದಿದ್ದು, ಎರಡು ಅಂತರಗಳನ್ನು ಒಳಗೊಂಡಿದೆ. ಈ ದ್ವಾರವು ಉತ್ತರಾಭಿಮುಖವಾಗಿದ್ದು, ಎರಡು ಬದಿಯಲ್ಲಿಯೂ ಜಯ, ವಿಜಯರ ಉಬ್ಬುಶಿಲ್ಪಗಳನ್ನು ಕಾಣಬಹುದು. ಈ ಶಿಲ್ಪಗಳ ಸುತ್ತಲೂ ಸಿಂಹ, ಮೀನು ಮತ್ತು ಮೊಸಳೆಗಳ ಚಿತ್ರಣವನ್ನು ಕಾಣಬಹುದು. ಹೆಬ್ಬಾಗಿಲ ಮೇಲ್ಭಾಗದ ಎರಡೂ ಕಡೆಯಲ್ಲಿ ಆನೆಯ ಸೊಂಡಿಲುಗಳ ಮಧ್ಯೆ ಲಿಂಗದ ಕೆತ್ತನೆ ಇದೆ. ಅದರ ಕೆಳಗಡೆ ಎರಡು ಸಿಂಹಗಳು ಜಗಿಯುವ ರೀತಿಯಲ್ಲಿ ಕೆತ್ತನೆ ಮಾಡಲಾಗಿದೆ. ಮುಂಬಾಗಿಲ ಬಾಗಿಲುವಾಡಗಳು ಸುಂದರವಾಗಿದ್ದು, ಇವು ೬.೫ ಅಡಿ ಎತ್ತರವಾಗಿವೆ. ಇದರ ಎರಡನೇ ಮಹಾದ್ವಾರವು ಮುಖ್ಯ ಬಾಗಿಲಿನಷ್ಟೇ ಎತ್ತರವಾಗಿದ್ದು, ಮುಂಭಾಗದಲ್ಲಿ ಜಯ ವಿಜಯ ಚಿತ್ರವನ್ನು ಕಾಣಬಹುದು. ಕಂಬದಲ್ಲೆಲ್ಲ ಅರೆನಗ್ನ ೨.೫ ಅಡಿ ಎತ್ತರದ ಶಿಲ್ಪಗಳನ್ನು ಕಾಣಬಹುದು. ಬಾಗಿಲಿನ ಮೇಲ್ಭಾಗದಲ್ಲಿ ಹಾಸು ಕಂಬದ ಮಧ್ಯದಲ್ಲಿ ಪುಷ್ಪಗಳನ್ನು ಕೆತ್ತಲಾಗಿದೆ. ಸುಖಾಸೀನದಲ್ಲಿ ನಾಲ್ಕು ಕಂಬಗಳ ಕೋಣೆಗಳಿದ್ದು

ಒಂದೊಂದು ಕಂಬವೂ ಒಂದೊಂದು ರೀತಿಯಲ್ಲಿ ಆಕರ್ಷಣೀಯವಾಗಿದೆ. ಕಂಬದ ಕೆಳಗಡೆ ರಾಕ್ಷಸನ ಚಿತ್ರವನ್ನು ಕೆತ್ತಲಾಗಿದೆ ಹಾಗೂ ಅದೇ ಕಂಬದಲ್ಲಿ ವಿನ್ಯಾಸದ ರೇಖೆಯನ್ನು ಕಾಣಬಹುದು. ಈ ಕಂಬಗಳು ೨.೫ ರಿಂದ ೩ ಅಡಿ ದಪ್ಪದಲ್ಲಿವೆ.

ಈ ದೇವಾಲಯದ ಕೋಣೆಯ ಎಡ ಮತ್ತು ಬಲಭಾಗದಲ್ಲಿ ಚಿಕ್ಕೀರಣ್ಣ ಮತ್ತು ದೊಡೀರಣ್ಣ ಎಂಬ ಕಾವಲುಗಾರರ ಶಿಲ್ಪಗಳಿವೆ. ದೊಡ್ಡೀರಣ್ಣನ ಶಿಲ್ಪ ೩ ಅಡಿ ಎತ್ತರವಾಗಿದೆ. ಚಿಕ್ಕೀರಣ್ಣನ ಶಿಲ್ಪ ೨.೫ ಅಡಿ ಎತ್ತರವಿದೆ.

ದೇವಾಲಯವು ಗರ್ಭಗುಡಿ ಹೊಂದಿದ್ದು, ಗರ್ಭಗುಡಿಯಲ್ಲಿ ೪ ಅಡಿಯ ಕಪ್ಪು ಶಿಲೆಯಲ್ಲಿನ ವೀರಭದ್ರನ ಮೂರ್ತಿಯನ್ನು ಕಾಣಬಹುದು. ಇದರ ಬಲಭಾಗದಲ್ಲಿ ದಕ್ಷಬ್ರಹ್ಮನ ಮೂರ್ತಿಯನ್ನು ಕಾಣಬಹುದು. ಇದರಲ್ಲಿನ ಕಂಬಗಳು ೨.೫ ಅಡಿ ದಪ್ಪವಾಗಿದ್ದು ಸುಮಾರು ೧೫ ಅಡಿ ಎತ್ತರವಿದೆ. ಕಂಬದ ಮೇಲ್ಭಾಗದಲ್ಲಿ ನಾಲ್ಕು ಭಾಗಕ್ಕೆ ಕಮಾನಿನಂತೆ ಗುಂಡನೆಯ ಕೆತ್ತನೆಯು ಚೋಳ ಲಾಂಛನದ ಪ್ರತೀಕ. ಹಾಗೇ ದೇವಸ್ಥಾನದ ಹಿಂಬದಿಯಲ್ಲಿ ಮೀನಿನ ಚಿತ್ರವಿದೆ. ಜೊತೆಗೆ ಗಂಗರ ಕಾಲದ ಆನೆಯ ಚಿತ್ರಗಳೂ ಸಹ ಕಂಡುಬರುತ್ತವೆ. ಪ್ರಾಂಗಣವು ವಿಶಾಲವಾಗಿದ್ದು ದೊಡ್ಡ ದೊಡ್ಡ ಕಂಬಗಳಿಂದ ಕೂಡಿದೆ. ಇವು ೮ ಅಡಿಯಷ್ಟು ಎತ್ತರವಾಗಿವೆ. ಇವು ಅಷ್ಟ ಭುಜಗಳಿಂದ ಕೂಡಿದ್ದು, ಸಪ್ತ ಸ್ವರಗಳು ಕೇಳಿಬರುತ್ತವೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಲಿಂಗದ ಪ್ರತಿಷ್ಠಾಪನೆಯಿದ್ದು ಗರ್ಭಗುಡಿಯಲ್ಲಿ ಯಾವುದೇ ದೇವರ ಶಿಲ್ಪಗಳ ಕೆತ್ತನೆ ಕಂಡುಬರುವುದಿಲ್ಲ. ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖ ಮಂಟಪಗಳನ್ನು ಹೊಂದಿದೆ. ನವರಂಗದ ಬಲಗಡೆ ಆಳ್ವಾರರ ೯ ಮೂರ್ತಿಗಳನ್ನು ಕಾಣಬಹುದು. ಗರ್ಭಗುಡಿಯ ಎದುರಿಗೆ ಹೆಣ್ಣು ಬಸವ ಮತ್ತು ಗಂಡು ಬಸವ ಶಿಲ್ಪಗಳನ್ನು ಕಾಣಬಹುದು.

ಗರ್ಭಗುಡಿ ನವರಂಗವನ್ನು ಹೊಂದಿದ್ದು, ಅದರ ಮೇಲೆ ಸುಮಾರು ೧೮ ರಿಂದ ೨೦ ಅಡಿ ಎತ್ತರದ ದ್ರಾವಿಡ ಶೈಲಿಯ ಶಿಬಿರವನ್ನು ನೋಡಬಹುದು. ಅದರ ಮೇಲೆ ತುದಿಯಲ್ಲಿ ಪಂಚಲೋಹದಿಂದ ಕೂಡಿದ ಕಳಶವನ್ನು ಕಾಣಬಹುದು. ಆ ಗೋಪುರವು ೪ ಹಂತಗಳಿಂದ ಕೂಡಿದೆ. ೩ನೇ ಹಂತದ ನಾಲ್ಕು ಕಡೆಯಲ್ಲಿ ನಂದಿಯ ಚಿತ್ರವನ್ನು ಕಾಣಬಹುದು. ಅದೇ ರೀತಿ ದೇವಾಲಯದ ಮುಂಭಾಗದಲ್ಲಿ ಪ್ರಾಂಗಣದ ಮೇಲೆ ಮಧ್ಯದಲ್ಲಿ ಶಿವಪಾರ್ವತಿಯ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಎರಡೂ ಕಡೆ ದ್ವಾರಪಾಲಕರ ರಚನೆಯನ್ನು ಕಾಣಬಹುದು. ಹಾಗೆಯೇ ಎರಡೂ ಕಡೆ ಮಗ್ಗುಲಲ್ಲಿ ಬೃಹದಾಕಾರದ ನಂದಿ ಹಾಗೂ ದೇವಾಲಯದ ಹಿಂಬದಿಯಲ್ಲಿ ಗೋಡೆಯ ಮೇಲೆ ಮತ್ಸರದ ಚಿತ್ರಣವನ್ನು ಕೆತ್ತಲಾಗಿದೆ. ಹೊರಾಂಗಣ ಗೋಡೆಯು ಅಲಂಕಾರಿಕತೆಯಲ್ಲಿ ಅಷ್ಟೊಂದು ಕಲೆಯ ವಿಶೇಷತೆಯನ್ನು ಹೊಂದಿರುವುದಿಲ್ಲ.

ದೇವಾಲಯದ ಗರ್ಭಗುಡಿಯ ಮೇಲೆ ೧೫ ರಿಂದ ೨೦ ಅಡಿಯಷ್ಟು ಎತ್ತರವಾದ ಗೋಪುರವನ್ನು ಇಟ್ಟಿಗೆ ಗಾರೆಯ ಮಿಶ್ರಣದಿಂದ ನಿರ್ಮಿಸಲಾಗಿದೆ. ಈ ಗೋಪುರವು ೩ ಹಂತಗಳನ್ನು ಹೊಂದಿದ್ದು, ದ್ರಾವಿಡ ಶೈಲಿಯದ್ದಾಗಿದೆ. ದೇವಾಲಯದ ಹೊರ ಗೋಡೆಯು ೧೨ ಅಡಿ ಎತ್ತರವಿದೆ.

ಹೆಸರು : ಚೊಕ್ಕನಾಥೇಶ್ವರ ಸ್ವಾಮಿ ದೇವಾಲಯ

ಸ್ಥಳ : ಕೆಸ್ತೂರಿನ ಹೊರವಲಯ

ಕಾಲ : ೮ನೇ ಶತಮಾನದ ಉತ್ತರಾರ್ಧ

ರಾಜವಂಶ : ಗಂಗರ

ದಿಕ್ಕು : ಉತ್ತರಾಭಿಮುಖ

ವಸ್ತು : ಕಣಶಿಲೆ

ಈ ದೇವಾಲಯವು ಕಲಾತ್ಮಕತೆಯಲ್ಲಿ ಅಷ್ಟೊಂದು ವಿಶೇಷತೆಯಿಂದ ಕೂಡಿರುವುದಿಲ್ಲ. ೧೮ ಥ ೫ ೧೬.೮ ಅಡಿ ವಿಸ್ತಾರ ಹೊಂದಿದೆ. ದೇವಾಲಯವು ಗರ್ಭಗುಡಿ ಮತ್ತು ಮುಖಮಂಟಪಗಳನ್ನು ಹೊಂದಿದೆ. ಸರಳ ಕಲಾತ್ಮಕತೆಯ ೪ ಪೂರ್ಣಕಂಬಗಳು ೪ ಅರ್ಧ ಕಂಬಗಳನ್ನು ಕಾಣಬಹುದು. ನವರಂಗವು ವಿಶಾಲವಾಗಿದ್ದು ಇಲ್ಲಿನ ಆದಿದೇವತೆ ವಿನಾಯಕನು ೩ ಅಡಿ ಎತ್ತರವಾಗಿದ್ದು ಎರಡು ಆಯುಧಗಳನ್ನು ಹಿಡಿದು ನಿಂತಿದ್ದಾನೆ. ಗರ್ಭಗುಡಿಯಲ್ಲಿ ೩ ಅಡಿ ಎತ್ತರ ಶಿವಲಿಂಗವು ಪುರಾತನವಾದ ಲಕ್ಷಣಗಳನ್ನು ಒಳಗೊಂಡಿದೆ. ನವರಂಗದಲ್ಲಿ ಸಪ್ತಮಾರ್ಷಿಕ ಭೈರವ ಮತ್ತು ನಾಗ ಪ್ರತಿಮೆಗಳನ್ನು ಕಾಣಬಹುದು. ಗರ್ಭಗುಡಿಯ ಮೇಲ್ಭಾಗದಲ್ಲಿ ೧೦ ಅಡಿ ಎತ್ತರದ ಗೋಪುರವಿದ್ದು ತುದಿಯಲ್ಲಿ ಪಂಚಲೋಹದ ಕಳಶವಿದೆ. ಇದು ದ್ರಾವಿಡ ಶೈಲಿಯ ಗೋಪುರವಾಗಿದೆ. ಇದು ೪ ಅಂತಸ್ತುಗಳಿಂದ ಕೂಡಿದುದಾಗಿದೆ. ದೇವಾಲಯದ ಮುಂಭಾಗದಲ್ಲಿ ಗರ್ಭಗುಡಿಯ ಎದುರಿನಲ್ಲಿ ಜೋಡಿ ನಂದಿ ವಿಗ್ರಹಗಳಿವೆ. ಗಣಪತಿ ಗುಡಿಯ ಎಡಭಾಗದಲ್ಲಿ ಕಳಸದ ಕೆತ್ತನೆಗಳಿವೆ. ಮೇಲ್ಭಾಗದಲ್ಲಿ ಲಿಂಗ, ಕೆಳಭಾಗದಲ್ಲಿ ಹೂವು ಕೆತ್ತನೆ ಮಾಡಲಾಗಿದೆ. ಪಾರ್ವತಿಯ ಗುಡಿಯ ಎದುರುಗಡೆ ಕಳಸ, ಮೇಲ್ಭಾಗದಲ್ಲಿ ಹೂವು ಕೆತ್ತನೆ ಮಾಡಲಾಗಿದೆ. ದೇವಾಲಯದ ಎಡಭಾಗದಲ್ಲಿ ನವಗ್ರಹವಿದ್ದು, ಮುಂದೆ ನಾಗರ ಕಟ್ಟೆ ಇದೆ. ದೇವಾಲಯವು ಪೂರ್ವಾಭಿಮುಖವಾಗಿದೆ.

ಹೆಸರು : ಮುತ್ತುರಾಯಸ್ವಾಮಿ ದೇವಾಲಯ

ಸ್ಥಳ : ಜಕ್ಕೇನಹಳ್ಳಿಯ ಊರ ಹೊರವಲಯದಲ್ಲಿ

ಕಾಲ : ೧೬ನೇ ಶತಮಾನ

ರಾಜವಂಶ : ರಜಪೂತ ವಂಶಸ್ಥರು

ದಿಕ್ಕು : ಪೂರ್ವಾಭಿಮುಖ

ವಸ್ತು : ಕಣಶಿಲೆ

ಈ ದೇವಾಲಯವು ಊರಹೊರವಲಯದಲ್ಲಿದ್ದು ಕಣಶಿಲೆಯಿಂದ ನಿರ್ಮಿಸಲಾಗಿದೆ. ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಗರ್ಭಗುಡಿ ನವರಂಗವನ್ನು ಹೊಂದಿದ್ದು, ನವರಂಗದಲ್ಲಿ ನಾಲ್ಕು ಕಂಬಗಳನ್ನು ಹೊಂದಿದೆ. ಇದು ರಜಪೂತರ ಕಾಲಕ್ಕೆ ಸಂಬಂಧಿಸಿದ್ದು, ಎಂಬುದಾಗಿ ತಿಳಿಸುವ ಪಕ್ಕದಲ್ಲಿನ ಕಲ್ಲಿನ ಶಾಸನ ಸ್ಪಷ್ಟಪಡಿಸುತ್ತದೆ. ೧೯೫೫-೫೬ರಲ್ಲಿ ನವೀಕರಿಸಲಾಗಿದೆ. ಸರಳವಾದ ಬಾಗಿಲು ವಾಡಗಳಿವೆ. ಗರ್ಭಗೃಹದಲ್ಲಿ ೪ ಅಡಿಯ ಮುತ್ತುರಾಯ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಮುಖಮಂಟಪ ನಾಲ್ಕು ಕಂಬಗಳನ್ನು

ಹೊಂದಿದ್ದು ಚೌಕಾಕಾರ ಅಷ್ಟಕೋನಾಕೃತಿ ಚೌಕಾಕಾರದ ಮೇಲೆ ಬೋಧಿಗೆಯನ್ನು ಒಳಗೊಂಡಿದೆ. ಮೇಲ್ಭಾಗಕ್ಕೆ ಇಟ್ಟಿಗೆ ಮತ್ತು ಗಾರೆಗಳನ್ನು ಬಳಸಿ ಕಟ್ಟಿದ ಮೇಲ್ಛಾವಣಿಯಿದೆ.

ಹೆಸರು : ಮಂಜುನಾಥ ದೇವಾಲಯ

ಸ್ಥಳ : ಬೆಳಧರ ಗ್ರಾಮದ ರಸ್ತೆಯ ಪಕ್ಕ

ವಂಶ : ಪಾಳೆಗಾರರು

ದಿಕ್ಕು : ಪೂರ್ವಾಭಿಮುಖ

ವಸ್ತು : ಸಿಮೆಂಟ್ ಮತ್ತು ಗಾರೆಕಲ್ಲುಗಳಿಂದ

ದೇವಾಲಯವು ಉದ್ದ ೨೫ ಅಡಿ ಅಗಲ ೮ ಮೀಟರ್ ಉದ್ದವಾದ ವಿಸ್ತೀರ್ಣವನ್ನೊಂದಿದೆ. ಪ್ರಸ್ತುತ ಈ ದೇವಾಲಯ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹವು ಮುಖಮಂಟಪವನ್ನು ಹೊಂದಿದೆ. ಬಾಗಿಲುದ್ವಾರ, ಪಶ್ಚಿಮಾಭಿಮುಖವಾಗಿದೆ. ಗರ್ಭಗೃಹದಲ್ಲಿ ೬.೫ ಅಡಿಯ ಈಶ್ವರ ಲಿಂಗ ಇತ್ತೀಚಿನದು. ಬಾಗಿಲು ದ್ವಾರಗಳ ಸರಳತೆಯಿಂದ ಕೂಡಿವೆ. ಅಂತರಾಳ ಮತ್ತು ಗರ್ಭಗೃಹದಲ್ಲಿ ಮೇಲ್ಛಾವಣಿಗೆ ಕಲ್ಲನ್ನು ಉದ್ದವಾಗಿ ಹಾಸಲ್ಪಟ್ಟಿದೆ. ಮೂಲದೇವರ ಅಕ್ಕ ಪಕ್ಕದಲ್ಲಿ ಪಾರ್ವತಿ ಅಮ್ಮನವರ ಶಿಲ್ಪಗಳ ಗುಡಿಗಳಿವೆ. ದೇವಾಲಯದ ಹೊರಭಾಗ ಆದಿಷ್ಟಾನ ಭಿತ್ತಿ ಶಿಬಿರವನ್ನು ಒಳಗೊಂಡಿದೆ. ಹೊರಭಾಗದ ಭಿತ್ತಿ ಯಾವುದೇ ಅಲಂಕಾರವಿಲ್ಲದೆ ಸಪಾಟಾಗಿ ಮೂಲರೂಪದಲ್ಲಿ ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಲಾಗಿದೆ.

ಹೆಸರು : ಸೋಮೇಶ್ವರ ದೇವಾಲಯ

ಸ್ಥಳ : ಹಿರೇತೊಟ್ಲುಕೆರೆಯ ಊರ ಹೊರವಲಯದಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಚೋಳರು

ದಿಕ್ಕು : ಸೂರ್ಯೋದಯಕ್ಕೆ ಮುಖ ಮಾಡಿ

ವಸ್ತು : ಕಣಶಿಲೆ

ಈ ದೇವಾಲಯವು ೧೦ ಮೀ. ಉದ್ದ, ೧೪ ಮೀ. ಅಗಲವಾಗಿದೆ. ಗರ್ಭಗೃಹ ಮತ್ತು ಅಂತರಾಳವನ್ನು ಒಳಗೊಂಡಿದೆ. ದೇವಾಲಯವು ೨ ಅಡಿ ಎತ್ತರದ ಜಗಲಿಯ ಮೇಲೆ ಚೌಕಾಕಾರವಾಗಿ ನಿರ್ಮಾಣವಾಗಿದೆ. ದೇವಾಲಯದ ಮುಂಭಾಗ ಪ್ರವೇಶ ದ್ವಾರವಿದ್ದು ಪ್ರವೇಶದ್ವಾರದ ಕಂಬಗಳು ೮ ಅಡಿ ಎತ್ತರವಾಗಿವೆ. ಗರ್ಭಗೃಹದಲ್ಲಿ ಗೋಕರ್ಣ ಲಿಂಗದಷ್ಟೇ ಸೌಂದರ್ಯತೆಯಿಂದ ಕೂಡಿದ ೪ ಅಡಿ ಲಿಂಗವಿದೆ. ಇತ್ತೀಚೆಗೆ ಲಿಂಗಕ್ಕೆ ೫ ಅಡಿ ಎತ್ತರದ ಮುಖವಾಡವನ್ನು ಮಾಡಿಸಲಾಗಿದೆ. ಗರ್ಭಗೃಹದ ಬಾಗಿಲವಾಡಗಳನ್ನು

ಇತ್ತೀಚೆಗೆ ತಾಮ್ರದಿಂದ ಮಾಡಿಸಿ ಅಂಟಿಸಲಾಗಿದೆ. ಅಂತರಾಳದಲ್ಲಿ ಲಿಂಗದ ಎದುರಿಗೆ ಬಸವಣ್ಣನ ವಿಗ್ರಹವಿದೆ. ಪಕ್ಕದ ಗರ್ಭಗೃಹದಲ್ಲಿ ಪಾರ್ವತಿ ಮತ್ತು ಗಣೇಶನ ಮೂರ್ತಿ ಶಿಲ್ಪಗಳಿವೆ. ಅಂತರಾಳದ ನವರಂಗದಲ್ಲಿ ೪ ಪೂರ್ಣ ಕಂಭಗಳಿವೆ. ಇವು ಸರಳವಾದ ಕೆತ್ತನೆಯಿಂದ ಕೂಡಿದ್ದು, ಅಷ್ಟಕೋನಾಕೃತಿಯಲ್ಲಿವೆ. ಮಧ್ಯದಲ್ಲಿರುವ ನಂದಿ ಶಿವಲಿಂಗಕ್ಕೆ ಮುಖವಾಗಿದೆ. ಸ್ತಂಭಗಳು ಪುಷ್ಪಬೋಧಿಗೆಯನ್ನು ಒಳಗೊಂಡಿದೆ.

ಹೆಸರು : ಚಂದ್ರಮೌಳೇಶ್ವರ ದೇವಾಲಯ

ಸ್ಥಳ : ಕೆಂಚೇನಹಳ್ಳಿಯ ಊರಮಧ್ಯದಲ್ಲಿ

ಕಾಲ : ೧೫ – ೧೬ ಶತಮಾನ

ರಾಜವಂಶ : ಪಾಳೇಗಾರರು

ದಿಕ್ಕು : ಪೂರ್ವಾಭಿಮುಖ

ವಸ್ತು : ಕಣಶಿಲೆ

ಈ ದೇವಾಲಯವನ್ನು ಹಿಂದೆ ರಂಗನಾಥಸ್ವಾಮಿ ದೇವಾಲಯ ಎಂದು ಕರೆಯಲಾಗುತ್ತಿತ್ತು. ಈ ದೇವಾಲಯವು ೧೦ ಮೀ. ಉದ್ದ, ೧೦ ಮೀಟರ್ ಅಗಲವಿದೆ. ದೇವಾಲಯವು ಗರ್ಭಗೃಹ, ಮುಖ ಮಂಟಪವನ್ನು ಒಳಗೊಂಡಿದ್ದು, ೨ ಕಂಬಗಳಿವೆ. ಈ ಕಂಬಗಳು ಚೌಕಾಕಾರವಾಗಿವೆ. ಗರ್ಭಗೃಹದ ಮೇಲ್ಛಾವಣಿಯು ದಪ್ಪದ ಬಂಡೆಗಳಿಂದ ಎಳೆಯಲ್ಪಟ್ಟಿವೆ. ೩ ಅಂಕಣಗಳಿಂದ ಕೂಡಿದೆ ಗರ್ಭಗೃಹದಲ್ಲಿ ೩ ಅಡಿ ಎತ್ತರದ ಲಿಂಗವಿದೆ. ಪ್ರಸ್ತುತವಾಗಿ ಜೀರ್ಣೋದ್ಧಾರ ಮಾಡಲಾಗಿದೆ.

ಹೆಸರು : ದಶರಥ ದೇವಾಲಯ

ಸ್ಥಳ : ದೇವಲಾಪುರದ ಊರ ಹೊರವಲಯದಲ್ಲಿ

ಕಾಲ : ೧೬ – ೧೭

ರಾಜವಂಶ : ವಿಜಯನಗರ

ದಿಕ್ಕು : ಪಶ್ಚಿಮಾಭಿಮುಖ

ವಸ್ತು : ಕಣಶಿಲೆ

ಈ ದೇವಾಲಯದ ಒಳಭಾಗ ಗರ್ಭಗುಡಿ ಮತ್ತು ಅರ್ಧಮಂಟಪವನ್ನು ನವರಂಗವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣಿ ಅಷ್ಟಕೋನಾಕೃತಿಯಿಲ್ಲಿದೆ. ಅದರ ಮಧ್ಯದಲ್ಲಿ ಅರಳಿದ ಕಮಲವಿದೆ. ಪೀಠದಲ್ಲಿ ವೀರಭದ್ರನ ಶಿಲ್ಪ ಸ್ಥಾನಿಕ ಭಂಗಿಯಲ್ಲಿದೆ. ಅರ್ಧಮಂಟಪ ತೆರೆದ ಮಂಟಪವಾಗಿದ್ದು ಯಾವುದೇ ಅಲಂಕರಣೆ ಇಲ್ಲದೆ ಸರಳವಾಗಿದೆ. ಸಭಾ ಮಂಟಪದಲ್ಲಿ ನಾಲ್ಕು ಸ್ತಂಭಗಳು ಚೌಕಾಕಾರವಾಗಿದ್ದು ಭಿತ್ತಿಗೆ ಕಲ್ಲನ್ನು ವಿಸ್ತೃತವಾಗಿ ಬಳಸಲ್ಪಟ್ಟಿದೆ. ಇತ್ತೀಚೆಗೆ ಜೀರ್ಣೋಧಾರ ಮಾಡಲಾಗಿದೆ.

### ವೈಷ್ಣವ ದೇವಾಲಯಗಳು

ವೈಷ್ಣವ ಧರ್ಮದ ಪ್ರತೀಕವಾಗಿ ಕೋರಾ ಪರಿಸರದಲ್ಲಿ ವೈಷ್ಣವ ದೇವಾಲಯಗಳು ಕಂಡುಬರುತ್ತಿವೆ. ಚನ್ನಕೇಶವ ಕೋದಂಡರಾಮ, ಗರುಡ ಮತ್ತು ಪಾಳೇಗಾರರ ಕಾಲದ ಆಂಜನೇಯ, ಹನುಮಂತನ ದೇವಾಲಯಗಳು ಹೆಚ್ಚು ಕಂಡು ಬರುತ್ತವೆ. ಈ ದೇವಾಲಯಗಳೂ ಹೆಚ್ಚಿನ ಮಟ್ಟಿಗೆ ಆಯತಾಕಾರಕಾರದಲ್ಲಿದ್ದು ಗರ್ಭಗೃಹ ಚೌಕಾಕಾರ. ಅದರ ಮಧ್ಯೆ ಪೀಠ ಮಾತ್ರ ಉಳಿದಿದೆ. ಗರ್ಭಗೃಹದ ಮೇಲ್ಛಾವಣಿ ವಿಸ್ತೃತ ಕಲ್ಲನ್ನು ಮಾತ್ರ ಹೊಂದಿದ್ದು ಕೆಲವೊಂದು ಬೃಹತ್ ವೈಷ್ಣವ ದೇವಾಲಯಗಳಲ್ಲಿ ಮಾತ್ರ ಸುಖಾಸೀನ ಇದ್ದು, ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ. ಅದಕ್ಕೆ ಸೂಕ್ತವಾದ ಅಂತರಾಳವಿದ್ದು, ಬಾಗಿಲುವಾಡಗಳು ಸರಳ ರೀತಿಯಲ್ಲಿದ್ದು ಹೂಗಳಿಂದ ಅಲಂಕೃತಗೊಂಡಿದೆ. ಅಂತರಾಳದ ಮುಂದಿನ ಭಾಗವೇ ಪ್ರದಕ್ಷಿಣಾ ಪಥ. ಅರ್ಧಮಂಟಪದ ಲಾಲಾಟಬಿಂಬದಲ್ಲಿ ವೈಷ್ಣವ–ಸ್ತ್ರೀ ಪುರುಷರ ದೇವತೆಗಳ ಶಿಲ್ಪಗಳಿರುತ್ತವೆ. ಬಾಗಿಲುವಾಡದ ಅಕ್ಕಪಕ್ಕದಲ್ಲಿ ಸಾಂಧಾರ ಶೈಲಿಯ ಬಾಗಿಲು ಇದ್ದು ಸ್ಥಾನಿಕ ಭಂಗಿಯಲ್ಲಿ ವೈಷ್ಣವ ದ್ವಾರಪಾಲಕರಿರುವರು. ಪ್ರತಿ ದೇವಾಲಯದ ಎದುರಿಗೆ ಬಲಿಪೀಠ ಮತ್ತು ದೀಪಸ್ತಂಭವಿರುವುದು ಸಾಮಾನ್ಯವಾಗಿ ಕಂಡುಬರುವ ಲಕ್ಷಣವಾಗಿದೆ.

| | | |
|---|---|---|
| ಹೆಸರು | : | ಆಂಜನೇಯ ದೇವಾಲಯ |
| ಸ್ಥಳ | : | ಗೊಲ್ಲಹಳ್ಳಿಯ ಕೆರೆದಂಡೆಯ ಮೇಲೆ |
| ಕಾಲ | : | ೧೭–೧೮ನೇ ಶತಮಾನ |
| ರಾಜವಂಶ | : | ವಿಜಯನಗರೋತ್ತರ |
| ದಿಕ್ಕು | : | ಪಶ್ಚಿಮಾಭಿಮುಖ |
| ವಸ್ತು | : | ಗಾರೆ ಮತ್ತು ಕಣಶಿಲೆ |

ದೇವಾಲಯದ ಉದ್ದ ೧೨ ಮೀ ಅಗಲ ೧೦ ಮೀ. ಇದೆ. ಈ ದೇವಾಲಯದ ಗರ್ಭಗೃಹ, ಮುಖಮಂಟಪವನ್ನು ಒಳಗೊಂಡಿದೆ. ಮೇಲ್ಛಾವಣಿಯು ಬಂಡೆಗಳ ಉದ್ದವಾಗಿ ಹಾಸಲ್ಪಟ್ಟಿದ್ದು ಭಿತ್ತಿಗೆ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ಗರ್ಭಗೃಹದಲ್ಲಿ ೫.೫ ಅಡಿ ಎತ್ತರದ ಹನುಮಂತನ ಮೂರ್ತಿ ಶಿಲ್ಪವಿದೆ. ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಪುಷ್ಪ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಇವುಗಳೊಡನೆ ಲತಾ ಬಳ್ಳಿ ದ್ವಾರದ ಬದಿಯಲ್ಲಿ ಪದ್ಮದ ಉಬ್ಬು ಕೆತ್ತನೆಗಳಿವೆ.

ಮುಖಮಂಟಪದ ಪ್ರವೇಶದ್ವಾರದ ಎದುರಿಗೆ ದೀಪಸ್ತಂಭವಿದೆ. ಪ್ರವೇಶದ್ವಾರದ ಎರಡು ಬಾಗಿಲುವಾಡಗಳ ವೈಷ್ಣವ ಮೂರ್ತಿಗಳ ಮೂರ್ತಿ ಶಿಲ್ಪಗಳಿವೆ. ಪ್ರವೇಶದ್ವಾರದ ಪಕ್ಕದಲ್ಲಿ ಪರಿವಾರ

ದೇವತೆಗಳ ಚಿಕ್ಕಗುಡಿಗಳಿವೆ. ಮುಖ ಮಂಟಪದ ಪ್ರವೇಶದ್ವಾರದಲ್ಲಿ ೮ ಎತ್ತರದ ಗೋಪುರವಿದೆ. ಇದನ್ನು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾಗಿದೆ.

ಹೆಸರು : ಆಂಜನೇಯ ದೇವಾಲಯ

ಸ್ಥಳ : ಅಹೋಬಲ ಅಗ್ರಹಾರ

ಕಾಲ : ೧೬ನೇ ಶತಮಾನ

ರಾಜವಂಶ : ವಿಜಯನಗರ

ದಿಕ್ಕು : ಪುರ್ವಾಭಿಮುಖ

ವಸ್ತು : ಕಣಶಿಲೆ

ಈ ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯವು ಜಗಲಿಯ ಮೇಲೆ ನಿರ್ಮಾಣವಾಗಿದೆ. ಗರ್ಭಗೃಹದಲ್ಲಿ ೬ ಅಡಿಎತ್ತರದ ಆಂಜನೇಯನ ಉಬ್ಬು ಶಿಲ್ಪವಿದೆ. ಆಂಜನೇಯನು ವೀರಾವೇಶದಲ್ಲಿ ನಿಂತಿದ್ದು ಸರ ಕಾಲ್ಕಡಗ ಕೆಯೂರು ಧರಿಸಿರುವನು. ದೇವಾಲಯ ಗರ್ಭಗೃಹವನ್ನು ಮಾತ್ರ ಒಳಗೊಂಡಿದೆ. ಇದರಲ್ಲಿ ಕಣಶಿಲೆಯಲ್ಲಿನ ೩ ಅಡಿ ಎತ್ತರದ ಆಂಜನೇಯನ ಶಿಲ್ಪವನ್ನು ಸ್ಥಾಪಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ದೀಪಸ್ಥಂಭವಿದೆ. ಬಲಮುಂಭಾಗದಲ್ಲಿ ಪೂರ್ವಕ್ಕೆ ಮುಖಮಾಡಿಕೊಂಡಿರುವ ಒಂದು ವೀರಮಾಸ್ತಿಗಲ್ಲು ಕಂಡುಬರುತ್ತದೆ. ಈ ದೇವಾಲಯ ೧೮ನೇ ಶತಮಾನದಾಗಿದ್ದು ವಿಜಯನಗರೋತ್ತರ ಶೈಲಿಯಲ್ಲಿ ನಿರ್ಮಾಣವಾಗಿರುವುದು.

ಹೆಸರು : ಆಂಜನೇಯ ದೇವಾಲಯ

ಸ್ಥಳ : ಚಿನಗದ ಹೊರವಲಯ

ಕಾಲ : ೧೬–೧೭ನೇ ಶತಮಾನ

ರಾಜವಂಶ : ವಿಜಯನಗರ

ದಿಕ್ಕು : ಉತ್ತರಾಭಿಮುಖ

ವಸ್ತು : ಕಲ್ಲು ಮತ್ತು ಸಿಮೆಂಟ್

ಈ ದೇವಾಲಯವು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ದೇವಾಲಯ ಗರ್ಭಗೃಹ, ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ೫ ಅಡಿ ಎತ್ತರದ ಆಂಜನೇಯ ಶಿಲ್ಪವಿದೆ. ಬಿಲ್ಲು ಮತ್ತು ಬಾಣ ಹಿಡಿದು ನಿಂತಿದ್ದಾನೆ. ಇದನ್ನು ವ್ಯಾಸರಾಯರು ನಿರ್ಮಿಸಿದ್ದಾರೆಂಬ ಪ್ರತೀತಿ. ಕರ್ನಾಟಕದಲ್ಲಿಯೇ ಈ ರೀತಿಯ ಆಂಜನೇಯನ ಮೂರ್ತಿ ಕಂಡು ಬಂದಿರುವುದು ವಿಶೇಷತೆಯಿಂದ ಕೂಡಿದೆ.

ಗರ್ಭಗೃಹದ ಮೇಲ್ಛಾವಣಿಗೆ ಕಲ್ಲನ್ನು ಹಾಸಲಾಗಿದೆ. ದೇವಾಲಯದ ಎದುರಿಗೆ ಗರುಡ ಸ್ತಂಭ ಹಾಗೂ ಬಲಿಪೀಠವಿದೆ. ದೇವಾಲಯದ ಪ್ರವೇಶದ್ವಾರದ ಶೈವ ದ್ವಾರಪಾಲಕರು ಮತ್ತು ಲತಾಬಳ್ಳಿಗಳಿಂದ ಅಲಂಕೃತಗೊಂಡಿದೆ.

| | | |
|---|---|---|
| ಹೆಸರು | : | ಹನುಮಂತ ದೇವಾಲಯ |
| ಸ್ಥಳ | : | ಹಿರೇಗುಂಡಗಲ್ |
| ಕಾಲ | : | ೯ನೇ ಶತಮಾನ |
| ರಾಜವಂಶ | : | ಗಂಗರು |
| ದಿಕ್ಕು | : | ಪೂರ್ವಾಭಿಮುಖ |
| ವಸ್ತು | : | ಕಣಶಿಲೆ |

109292

ಈ ದೇವಾಲಯವು ಗರ್ಭಗೃಹ ಮತ್ತು ಮುಖ ಮಂಟಪವನ್ನು ಮಾತ್ರ ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣಿ ಸರಳತೆಯಿಂದ ಕೂಡಿದೆ. ಈ ದೇವಾಲಯವು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಶಿಖರವನ್ನು ಹೊಂದಿದೆ. ಇದರ ಮೇಲ್ಛಾವಣಿ ಬಂಡೆಯಿಂದ ಹಾಸಲ್ಪಟ್ಟಿದೆ. ಗರ್ಭಗೃಹದ ಆಂಜನೇಯ ಮೂರ್ತಿ ಶಿಲ್ಪವು ೬ ಅಡಿ ಎಬ್ಬು ಶಿಲ್ಪ ಇದು ಆಭರಣಗಳನ್ನು ಧರಿಸಿದ್ದು ಉತ್ತರಕ್ಕೆ ಮುಖ ಮಾಡಿಕೊಂಡಿದ್ದು ಬಲಗೈ ಅಭಯ ಹಸ್ತದಲ್ಲಿದ್ದು ಎಡಗೈಯ್ಯನ್ನು ಸೊಂಟದ ಮೇಲೆ ಇಟ್ಟುಕೊಂಡಂತೆ ಕೆತ್ತನೆ ಮಾಡಲಾಗಿದೆ.

| | | |
|---|---|---|
| ಹೆಸರು | : | ರಂಗನಾಥ ದೇವಾಲಯ |
| ಸ್ಥಳ | : | ಚಿನಗ |
| ಕಾಲ | : | ೧೫ನೇ ಶತಮಾನ |
| ರಾಜವಂಶ | : | ವಿಜಯನಗರ |
| ದಿಕ್ಕು | : | ದಕ್ಷಿಣಾಭಿಮುಖ |
| ವಸ್ತು | : | ಕಣಕಲ್ಲು |

ಚಿನಗದಲ್ಲಿನ ರಂಗನಾಥ ದೇವಾಲಯವು ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ದೇವಾಲಯ ಗರ್ಭಗೃಹ ಮತ್ತು ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ರಂಗನಾಥನ ಮೂರ್ತಿಶಿಲ್ಪವಿದೆ. ಮುಖಮಂಟಪದಲ್ಲಿ ಚೌಕಾಕಾರದ ಕಂಬಗಳಿವೆ. ದೇವಾಲಯದ ಪ್ರವೇಶದ್ವಾರದ ಬಾಗಿಲುವಾಡಗಳು ಸರಳತೆಯಿಂದ ಕೂಡಿದ್ದು ವೈಷ್ಣವ ಮೂರ್ತಿ ಶಿಲ್ಪಗಳಿವೆ. ಬಂಡೆಗಳನ್ನು ಮೇಲ್ಛಾವಣಿಯಲ್ಲಿ ಹಾಸಲಾಗಿದೆ.

ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಇವುಗಳು ತಮ್ಮ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗಧೆ ಅಭಯ ಹಸ್ತಧಾರಿಗಳಾಗಿ ಅಲಂಕೃತಗೊಂಡಿವೆ.

| | | |
|---|---|---|
| ಹೆಸರು | : | ಆಂಜನೇಯ ದೇವಾಲಯ |
| ಸ್ಥಳ | : | ಕೋರಾ |
| ಕಾಲ | : | ೧೬ನೇ ಶತಮಾನ |
| ರಾಜವಂಶ | : | ನಾಡಪ್ರಭುಗಳ ಆಳ್ವಿಕೆ |
| ದಿಕ್ಕು | : | ಪೂರ್ವಾಭಿಮುಖ |
| ವಸ್ತು | : | ಕಣಶಿಲೆ |

ದೇವಾಲಯವು ಕೋರಾದ ಹೊರವಲಯದಲ್ಲಿದೆ. ಗರ್ಭಗೃಹದಲ್ಲಿ ಬೆಣಚುಕಲ್ಲಿನಲ್ಲಿ ಏಕಶಿಲೆಯಲ್ಲಿ ಆಂಜನೇಯ ಶಿಲ್ಪವಿದೆ. ಇದು ಸುಮಾರು ೫ ಅಡಿ ಎತ್ತರವಿದ್ದು ಹನುಮಂತನು ತನ್ನ ಬಲಗೈಯಲ್ಲಿ ತಪ್ಪಡ ಮುದ್ರೆಯಲ್ಲಿ ಮತ್ತು ಎಡಗೈ ಫಲಹಿಡಿದಿದೆ ಮತ್ತು ಆಭರಣ ಉಡುಪುಗಳನ್ನು ಧರಿಸಿದೆ. ಈ ಮಂಟಪದ ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ದ್ವಾರದ ಮೇಲ್ಭಾಗದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸನದಲ್ಲಿ ಅಸೀನಳಾಗಿದ್ದಾಳೆ. ದ್ವಾರದ ಮೇಲ್ಭಾಗದಲ್ಲಿ ಅರಳಿದ ಪುಷ್ಪವಿದೆ.

| | | |
|---|---|---|
| ಹೆಸರು | : | ಹನುಮಂತ ದೇವಾಲಯ |
| ಸ್ಥಳ | : | ರಾಮಗೊಂಡನಹಳ್ಳಿ |
| ಕಾಲ | : | ೧೫-೧೬ನೇ ಶತಮಾನ |
| ರಾಜವಂಶ | : | ವಿಜಯನಗರ |
| ದಿಕ್ಕು | : | ಕಣಶಿಲೆ |

ದೇವಾಲಯ ಗರ್ಭಗೃಹವನ್ನು ಒಳಗೊಂಡು ಗರ್ಭಗೃಹದ ಮುಂಭಾಗದಲ್ಲಿ ಗರುಡಗಂಬವಿದೆ. ಗರ್ಭಗೃಹದಲ್ಲಿ ಉಬ್ಬು ಶಿಲ್ಪ ಕೆತ್ತನೆಯ ಏಕಶಿಲಾವಿಗ್ರಹ ಆಂಜನೇಯ ಶಿಲ್ಪವಿದೆ. ದೇವಾಲಯವು ಜಗತಿಯ ಮೇಲೆ ನಿರ್ಮಾಣವಾಗಿದೆ. ಗರ್ಭಗೃಹದ ಪ್ರವೇಶದ್ವಾರದಲ್ಲಿ ಸ್ತ್ರೀ ವೈಷ್ಣವದ್ವಾರ ಪಾಲಕರಿದ್ದಾರೆ.

**ಶಾಕ್ತ ಪಂಥ ದೇವಾಲಯಗಳು**

ಶಾಕ್ತ ಪಂಥವು ಜನಸಾಮಾನ್ಯರಲ್ಲಿ ಬೇರುಬಿಟ್ಟಂತಹ ಪಂಥವಾಗಿದೆ. ಪ್ರಾಚೀನ ಕಾಲದಿಂದಲೂ ಮಾತೃ, ಶಕ್ತಿ, ದುರ್ಗ, ಮಾರಿ ಮುಂತಾದ ಹೆಸರುಗಳಿಂದ ಪೂಜೆ ನಡೆದುಕೊಂಡು ಬಂದಿದೆ. ಇದರ ಕುರುಹುಗಳನ್ನು ಸಿಂಧೂ ಸಂಸ್ಕೃತಿಯಿಂದಲೇ ಗುರ್ತಿಸಬಹುದಾಗಿದೆ. ಆನರ ಜೀವನಾಡಿಯಲ್ಲಿ ಬೆರೆತುಹೋದ ಪಂಥವಾಗಿದೆ. ಇವಳು ಜಗತ್ತಿನ ಸೃಷ್ಟಿಕರ್ತೆಯಾಗಿದ್ದು ಅವ್ಯಕ್ತ ಸ್ವರೂಪದಲ್ಲಿದ್ದವಳು ತನ್ನ ಶರೀರದಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸೃಷ್ಟಿಸಿದವಳೆಂಬುದು ಈ ಪಂಥದ ಅಭಿಮತ. ಇದರಿಂದ ಹಲವಾರು ಮಾತೃದೇವತಾ ಕಲ್ಪನೆಗೆ ದಾರಿಮಾಡಿಕೊಟ್ಟಿತು. ಅವಳು ಶಿವನಿಗಿಂತ ಮಿಗಿಲಾದವಳು. ಇವಳನ್ನು ವೈಷ್ಣವರಲ್ಲಿ ಲಕ್ಷ್ಮೀ, ಶೈವರಲ್ಲಿ ದುರ್ಗಿ, ಕಾಳಿ, ಎಲ್ಲಮ್ಮ, ಮಹಿಷಾಸುರಮರ್ದಿನಿ ದೇವಾಲಯಗಳಾಗಿ ರೂಪುಗೊಂಡವು. ಪ್ರಸ್ತುತ ಕೋರಾ ಪರಿಸರಕ್ಕೆ ಸೀಮಿತವಾದ ಶಾಕ್ತ ದೇವಾಲಯಗಳನ್ನು ವಾಸ್ತು ವಿಶೇಷತೆಯಿಂದ ಇಲ್ಲಿ ಪ್ರಸ್ತಾಪಿಸಲಾಗಿದೆ.

| | | |
|---|---|---|
| ಹೆಸರು | : | ಬೊಮ್ಮನಳಮ್ಮ |
| ಸ್ಥಳ | : | ಜಿ. ಬೊಮ್ಮನಹಳ್ಳಿ |
| ವಂಶ | : | ಪಾಳೇಗಾರರು |
| ದಿಕ್ಕು | : | ದಕ್ಷಿಣಾಭಿಮುಖ |
| ವಸ್ತು | : | ಕಣಶಿಲೆ |

ದೇವಾಲಯವು ಗರ್ಭಗೃಹ, ಮುಖಮಂಟಪವನ್ನು ಮಾತ್ರ ಹೊಂದಿದೆ. ಗರ್ಭಗೃಹದಲ್ಲಿ ಅಮ್ಮನ ದೇವಿ ವಿಗ್ರಹವಿದೆ. ಗರ್ಭಗೃಹದ ಪ್ರವೇಶದ್ವಾರವು ಸರಳತೆಯಿಂದ ಕೂಡಿದ್ದು, ಗರ್ಭಗೃಹ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಭಿತ್ತಿಯು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿತವಾಗಿದೆ.

## ೪.೨ ಮೂರ್ತಿ ಶಿಲ್ಪಗಳು

ಮೂರ್ತಿ ಶಿಲ್ಪಗಳು ದೇವಾಲಯ ವಾಶ್ತುಶಿಲ್ಪದ ಅವಿಭಾಜ್ಯ ಅಂಗವಾಗಿವೆ. ಶಿಲ್ಪಕಲೆ ಅಥವಾ ಶಿಲ್ಪ ವ್ಯಾಪಕವಾದ ಅರ್ಥವನ್ನು ಹೊಂದಿದೆ. ಕಲೆಗಳಲ್ಲಿ 'ಶಿಲ್ಪ' ಎಂಬ ಪದವು ತನ್ನ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ. ನಂತರ ಇದು ತನ್ನ ವ್ಯಾಪ್ತಿಯನ್ನು ಪರಿಮಿತಗೊಳಿಸಿಕೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೨೩] ಮಾನವನ ಉಗಮದೊಂದಿಗೆ ಶಿಲ್ಪದ ಉಗಮವನ್ನು ಗುರ್ತಿಸಬಹುದು. ಈ ಜಗತ್ತನ್ನು ಸೃಷ್ಟಿಸಿದವನ್ನು ಜಗತ್ ಶಿಲ್ಪಿ ಎಂದು ವರ್ಣಿಸಿರುವುದುಂಟು.[೨೪] ಶಿಲ್ಪ ಎಂಬ ಪದವು 'ಶೀಲ ಸಮುದೌ' ಎಂಬ ಧಾತುವಿನಿಂದ ಬಂದಿದೆ. ಒಟ್ಟಾರೆ ಶಿಲ್ಪ ಎಂದರೇ ಮನಸ್ಸು ಸಮಾಧಿ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ ಎಂದು ಹೇಳಲಾಗಿದೆ ಶಿಲ್ಪ ಶಬ್ದದ ವ್ಯಾಪಕ ಅರ್ಥ ವಿಸ್ತಾರವನ್ನು ಈ ಹಂತದಲ್ಲಿ ಕಾಣಬಹುದು.[೨೫] ಶಿಲ್ಪ ಕರ್ಮಕಲಾಧಿಕಂ ಎನ್ನುವುದು ಅಮರಸಿಂಹ ಅಮರಕೋಶದ ವಿವರಣೆಯಾಗಿದೆ. ಕರ್ತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಇದು ಭಾರತೀಯ ವಾಸ್ತು, ಮೂರ್ತಿ, ಚಿತ್ರಕಲೆಗೆ ಹೆಸರುವಾಸಿಯಾಗಿದೆ.

ಮೂರ್ತಿ ಎಂಬ ಪದಕ್ಕೆ ಬಳಸಿದ ಪರ್ಯಾಯ ಪದಗಳಾದ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ, ಮುಂತಾದ ಶಬ್ದಗಳು ಅದೊಂದು ಭೌತಿಕ ವಸ್ತು ಎಂಬಂತೆ ಅರ್ಥಕೊಡುತ್ತವೆ.[೨೬] ಈ ರೀತಿ ಮೂರ್ತಿ ಶಿಲ್ಪವನ್ನು ಕುರಿತು ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಮೂರ್ತಿ ಶಾಸ್ತ್ರ ಅಥವಾ ಪ್ರತಿಮಾಶಾಸ್ತ್ರವೆಂದು ಕರೆಯಲಾಗುತ್ತದೆ.[೨೭] ಮೂರ್ತಿ ಶಿಲ್ಪವನ್ನುದ್ದೇಶಿಸಿ ಶಾಸ್ತ್ರೀಯವಾಗಿ ಹೇಳುವ ಶಾಸ್ತ್ರಗ್ರಂಥಗಳನ್ನು ಕಾಣಬಹುದು. ಅವುಗಳನ್ನು ಕಾಶ್ಯಪಶಿಲ್ಪ, ಮಾನಸಾರ, ಮಮರಾಂಗಣ ಸೂತ್ರಧಾರ, ಶಿಲ್ಪರತ್ನಂ, ಮಯಮತಂ, ಮಯವಾಸ್ತುಶಾಸ್ತ್ರ, ವಿಶ್ವಕರ್ಮ ವಾಶ್ತುಶಾಸ್ತ್ರ, ಸಕಲಾಧಿಕಾರ, ಕಾಶ್ಯಪ ಸಂಹಿತೆ, ದೇವತಾ ಮೂರ್ತಿ ಲಕ್ಷಣ, ಪ್ರಸಾದ ಮಂಡನ, ರಾಜವಲ್ಲಭದಂತಹ ಇಪ್ಪತ್ತು ಗ್ರಂಥಗಳು ಅತೀ ಪ್ರಮುಖವಾಗಿವೆ.[೨೮]

ಮೂರ್ತಿಶಿಲ್ಪದ ಕಲ್ಪನೆಯು ಭಾರತೀಯರಲ್ಲಿ ಸಿಂಧೂನಾಗರೀಕತೆಯಿಂದಲೂ ಕಂಡುಬರುತ್ತದೆ. ಪ್ರಾರಂಭದಲ್ಲಿ ರೇಖಾಚಿತ್ರಗಳಿಂದ ಕೂಡಿದ ಶಿಲ್ಪಗಳ ಆರಾಧನೆ ತದನಂತರದಲ್ಲಿ ಮೂರ್ತಿಗಳ ರೂಪದಲ್ಲಿ ಆರಾಧನೆಯ ಪರಿಕಲ್ಪನೆಯ ಬೆಳವಣಿಗೆಯಾಗುತ್ತಾ ಬಂದಿತು. ದೇವರ ಬಗ್ಗೆ ಅವರಲ್ಲಿದ್ದ ಪರಿಕಲ್ಪನೆಗಳು ಬದಲಾದಂತೆ ದೇವರ ಆರಾಧನೆಯ ರೀತಿಯೂ ಬದಲಾವಣೆ ಹೊಂದುತ್ತಾ ಸಾಗಿತು. ತದನಂತರದಲ್ಲಿ ಪ್ರಾಚೀನವಾದ ಶಿಲ್ಪಕೃತಿಗಳು ಮೌರ್ಯರ ಕಾಲಕ್ಕೆ ಸಂಬಂಧಿಸಿದುದಾಗಿದ್ದು ಕಲ್ಲಿನ ಸ್ತಂಭಗಳ ಮೇಲಿನ ವೃಷಭ, ಆನೆ, ಸಿಂಹ, ಕುದುರೆ, ಮೊದಲಾದ ಆಕೃತಿಗಳು ಪ್ರಮುಖವಾದವು. ತದನಂತರ ಶೃಂಗರ, ಕುಶಾನರು, ಕಳಿಂಗರು, ಶಿಲ್ಪಕಲೆಗೆ ಆಶ್ರಯವನ್ನು ಕೊಟ್ಟರು. ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ಗುಪ್ತರ ಕೊಡುಗೆ ಅಮೋಘವಾದುದು. ಇವರ ಭವ್ಯ ಕಲಾಪರಂಪರೆ ಹಾಗೂ ಸಾಹಿತ್ಯ, ವಿಜ್ಞಾನ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳಿಂದಾಗಿ ಇವರ ಕಾಲವನ್ನು ಸುವರ್ಣಯುಗ ಎಂದು ಕರೆಯಲಾಗಿದೆ.[೨೯] ಕರ್ನಾಟಕದಲ್ಲಿ

ಮೂರ್ತಿಶಿಲ್ಪದ ಬೆಳವಣಿಗೆಯನ್ನು ಗುರುತಿಸುವಾಗ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ಚೋಳರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಮೂರ್ತಿ ಶಿಲ್ಪದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ನೀಡಿದರು.

ಪ್ರಸ್ತುತ ಅಧ್ಯಯನದಲ್ಲಿ ಆಯಾ ರಾಜವಂಶಗಳ ಕಾಲದಲ್ಲಿ ನಿರ್ಮಾಣವಾದ ವಾಸ್ತು ಶೈಲಿಯ ದೇವಾಲಯಗಳಲ್ಲಿ ಅವರದೇ ಆದ ಮೂರ್ತಿ ಶಿಲ್ಪಗಳು ಬೆಳೆದುಬಂದಿವೆ. ಕಪ್ಪುಮಿಶ್ರಿತ ಬಳಪದ ಕಲ್ಲು, ಹಸಿರು ಮಿಶ್ರಿತ ಬಳಪದ ಕಲ್ಲುಗಳನ್ನು ಬಳಸಿ ವಿವಿಧ ಮೂರ್ತಿ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಲ್ಲುಗಳು ಮೂರ್ತಿ ಶಿಲ್ಪಿ ಕೆತ್ತನೆಗೆ ಅನುಕೂಲವಾದ್ದರಿಂದ ಅವುಗಳನ್ನು ಮೂರ್ತಿಗಳ ನಿರ್ಮಾಣಕ್ಕೆ ಬಳಸಿಕೊಂಡರು. ಸಾಮಾನ್ಯವಾಗಿ ಈ ರೀತಿಯ ಕಲ್ಲುಗಳನ್ನು ಹೆಚ್ಚು ಅಲಂಕಾರಿಕ ದೇವಮೂರ್ತಿಗಳಿಗೆ ಬಳಸುತ್ತಿದ್ದರು. ಕೋರಾ ಪರಿಸರದಲ್ಲಿ ನೊಳಂಬರ ಆಳ್ವಿಕೆಯು ವಿಶೇಷವಾಗಿದ್ದು, ಇವರ ಕಾಲದ ಮೂರ್ತಿ ಶಿಲ್ಪಗಳು ಬಹಳ ಸುಂದರವಾಗಿವೆ. ನಂತರದ ಪಾಳೆಯಗಾರರ ಕಾಲದಲ್ಲಿ ಚಿಕ್ಕಪುಟ್ಟ ದೇವಾಲಯಗಳು ನಿರ್ಮಾಣಗೊಂಡಿದ್ದು ಅವುಗಳಲ್ಲಿ ಹನುಮಂತ ಅಥವಾ ಆಂಜನೇಯ ಮೂರ್ತಿ ಶಿಲ್ಪಗಳೇ ಹೆಚ್ಚಾಗಿ ಕಂಡುಬರುತ್ತವೆ.

### ಶೈವ ಶಿಲ್ಪಗಳು

ಸಿಂಧೂ ನಾಗರೀಕತೆಯ ಧಾರ್ಮಿಕ ವ್ಯವಸ್ಥೆಯಲ್ಲಿ ದೊರೆತಿರುವ ಯೋಗ ಮುದ್ರೆಯಲ್ಲಿ ಅಸೀನನಾಗಿರುವ ಮೂರು ಮುಖದ ಪಶುಪತಿ ಶಿವನ ಚಿತ್ರಗಳು ಶೈವ ಪಂಥದ ಪ್ರಾಚೀನ ಮೂರ್ತಿ ಶಿಲ್ಪಗಳೆಂದು ಗುರ್ತಿಸಬಹುದಾಗಿದೆ. ವೈದಿಕ ಸಂಸ್ಕೃತಿಯ ಸಾಹಿತ್ಯದಲ್ಲಿ ಶಿವನ ಉಲ್ಲೇಖಗಳಿವೆ. ಚಾರಿತ್ರಿಕ ದೃಷ್ಟಿಯಿಂದಲೂ ಈ ಪರಂಪರೆಯ ಶಿಲ್ಪಗಳಿಗೆ ಪ್ರಾಚೀನ ನಿದರ್ಶನವಿದೆ. ಆಂಧ್ರಪ್ರದೇಶದ ರೇಣುಗುಟ್ಟ ಹತ್ತಿರದ ಗುಡಿಮಲ್ಲಿಂದದಲ್ಲಿಂದ ಕ್ರಿಪೂ. ೨ನೇ ಶತಮಾನದ ಪರಶುರಾಮೇಶ್ವರ ಲಿಂಗವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ನಾಡಿಗೆ ಸಂಬಂಧಿಸಿದಂತೆ ಕಾರವಾರ ಜಿಲ್ಲೆಯ ಅಂಕೋಲ ಬಳಿ ಚೋಳ ಮಹಾಕೂಟದಲ್ಲಿರುವ ಶಿವಲಿಂಗಗಳು ಶೈವರಾಧನೆಯ ಪ್ರಾಚೀನತೆಗೆ ಉದಾಹರಣೆಗಳಾಗಿವೆ.[೨೦] ಇದರಿಂದ ಶೈವ ಪಂಥ ಅತೀ ಪ್ರಾಚೀನವಾದುದೆಂದು ಶಿವನನ್ನು ಮೂರ್ತಿ ರೂಪಕ್ಕಿಂತ ಅಮೂರ್ತವಾದ ಲಿಂಗದ ರೂಪದಲ್ಲಿ ಹೆಚ್ಚಿನ ಮಟ್ಟಿಗೆ ಪೂಜಿಸುವ ಸಂಪ್ರದಾಯವಿದೆ. ಶಿವಪೂಜೆ ಎಂದರೆ ಹೆಚ್ಚಿನ ಮಟ್ಟಿಗೆ ಲಿಂಗಾರಾಧನೆಯೇ ಆಗಿದೆ.[೨೧] ವೈದಿಕ ಸಂಸ್ಕೃತಿಯಿಂದ ಯಜ್ಞಯಾಗಾದಿಗಳ ಸಂದರ್ಭದಲ್ಲಿ ಶಿವನನ್ನು ಶೂಲ, ತ್ರಿಶೂಲ ಮತ್ತು ಪ್ರತಿರೂಪವಾದ ಲಿಂಗದ ರೂಪದಲ್ಲಿ ಪೂಜಿಸಲಾಗುತ್ತಿತ್ತು. ೨೨ ಲಿಂಗವನ್ನು ಸ್ಥಾವರ ಜಂಗಮ ಎಂಬುದಾಗಿಯೂ ಶಿಲ್ಪಶಾಸ್ತ್ರಗಳಲ್ಲಿ ಸ್ಥೂಲಲಿಂಗ, ಸೂಕ್ಷ್ಮಲಿಂಗ, ಭದ್ರಲಿಂಗ, ಭಾರಶಿವಲಿಂಗ, ಸ್ತಂಭಲಿಂಗ, ಸ್ವಯಂಭೂಲಿಂಗ, ದಿವ್ಯಲಿಂಗ, ದೈವಿಕ ಲಿಂಗ, ಬಾಣಲಿಂಗ, ಪೃಥ್ವೀಲಿಂಗ, ಆಪಲಿಂಗ, ತೇಜೋಲಿಲಂಗ, ವಾಯುಲಿಂಗ, ಆಕಾಶಲಿಂಗ ಮೊದಲಾದ ಪ್ರಕಾರಗಳ ಲಿಂಗಗಳ ಬಗ್ಗೆ ವಿವರಣೆ ಇದೆ. ಅತೀ ಪ್ರಾಚೀನ ಲಿಂಗಗಳು ಪೀಠ ರಹಿತವಾಗಿರುತ್ತವೆ. ಇವು ತಮ್ಮದೇ ಆದ ವೈಶಿಷ್ಟ್ಯತೆಯನ್ನು

ಉಳಿಸಿಕೊಂಡಿದೆ. ಪ್ರಸ್ತುತ ಕೋರಾ ಪರಿಸರಕ್ಕೆ ಸೀಮಿತವಾಗಿ ನೋಡಿದರೆ ಸುಮಾರು ೫ ಲಿಂಗಗಳು ಪ್ರಾಚೀನತೆಯನ್ನು ಉಳಿಸಿಕೊಂಡಿವೆ. ಅನ್ನದಾನ ಶಾಸ್ತ್ರಿಪಾಳ್ಯ, ಕೋರಾ, ರಾಮಗೊಂಡನಹಳ್ಳಿ, ಹಿರೇತೊಟ್ಲುಕೆರೆ ಮತ್ತು ಬೆಳಧರದಲ್ಲಿ ಪ್ರತಿಷ್ಠಾಪಿಸಲಾದ ಲಿಂಗಗಳು, ಹಿರೇತೊಟ್ಲುಕೆರೆಯ ಶಿವಲಿಂಗವು ಸುಮಾರು ೧೬ನೇ ಮತ್ತು ೧೮ನೇ ಶತಮಾನದ್ದಾಗಿದೆ. ಇದು ಗಂಗ, ಚೋಳರ ಕಾಲಕ್ಕೆ ಸಂಬಂಧಿಸಿದುದಾಗಿದೆ.

ಇವು ಚರಿತ್ರೆಯ ರಚನೆಯಲ್ಲಿ ಗೊಂದಲ ಉಂಟಾದಾಗ ಸಹಾಯಕವಾಗಬಲ್ಲ ಬಹುಮುಖ್ಯ ಪುರಾತತ್ವೀಯ ಆಕರಗಳು ಆಗಿವೆ. ಇವುಗಳ ಅಧ್ಯಯನದಿಂದ ಆಯಾ ಪರಿಸರದ ಮಾನವನ ಚರಿತ್ರೆ ಹಾಗೂ ಅವನ ಕಾಲದ ವಿಭಿನ್ನ ಸಂಸ್ಕೃತಿಯ ಪರಿಚಯ ನಮಗೆ ದೊರೆಯುತ್ತದೆ. ಜೊತೆಗೆ ಆಯಾ ದೇವಾಲಯಗಳ ಕಲೆ, ವಾಸ್ತುಶಿಲ್ಪ, ಮೂರ್ತಿ ಶಿಲ್ಪ, ಅವುಗಳ ಪರಿಚಯ, ವಿಶಿಷ್ಟತೆ, ಅಂದಿನ ವಾಸ್ತುಶಿಲ್ಪದ ಕುಶಲತೆ, ತಾಂತ್ರಿಕ ಜ್ಞಾನ, ಅವರ ಕಲಾಭಿರುಚಿ ಮುಂತಾದ ಸಂಗತಿಗಳನ್ನು ಈ ಅಧ್ಯಯನದಿಂದ ತಿಳಿಯಬಹುದು. ಈ ದೃಷ್ಟಿಯಿಂದ ಕೋರಾ ಹೋಬಳಿ ಪರಿಸರವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಈ ಪರಿಸರದಲ್ಲಿ ಗಂಗರ ಶೈಲಿಯಿಂದ ಹಿಡಿದು, ಪಾಳೆಯಗಾರರ ಶೈಲಿಯವರೆಗೂ ಕಾಣಬಹುದು. ಇವುಗಳಲ್ಲಿ ಬಹುಮುಖ್ಯವಾಗಿ ಕಲ್ಯಾಣಿ ಚಾಲುಕ್ಯರ, ಹೊಯ್ಸಳರ, ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ದೇವಾಲಯಗಳೇ ಹೆಚ್ಚು ಎಂದು ಹೇಳಬಹುದಾಗಿದೆ. ಈ ಪರಿಸರದಲ್ಲಿ ಕಲೆ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳಿಂದ ಕೂಡಿದ ಕೆಲವು ದೇವಾಲಯಗಳನ್ನು ಕಾಣಬಹುದು. ಕ್ರಿ.ಶ. ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಕರ್ನಾಟಕದ ಅಲ್ಲದೆ ದಕ್ಷಿಣ ಭಾರತದ ಬಹುಭಾಗದಲ್ಲಿ ಆಳಿದ ಅರಸರುಗಳ ರಾಜಕೀಯ, ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ತಿಳಿಯಬಹುದಾಗಿದೆ.

### ಶಿಲ್ಪಗಳಲ್ಲಿ ಆಸನಗಳು

ಮೂರ್ತಿ ಶಿಲ್ಪಗಳು ಚಕ್ರ ಪ್ರಧಾನ. ವಿಷ್ಣುವಿನ ಕೆಲವು ರೂಪದ ಶಿಲ್ಪಗಳು. ಉದಾ: ಮತ್ಸ್ಯಾವತಾರ, ಶೇಷಶಯನ ಅವತಾರ, ದೇವಿ ಶಿಲ್ಪಗಳು, ಭಕ್ತಿ ಶಿಲ್ಪಗಳು ಕಂಡುಬರುತ್ತವೆ. ಭಂಗಿಯಲ್ಲಿ ಸಮಭಂಗಿ, ದ್ವಿಭಂಗಿ, ತ್ರಿಭಂಗಿ, ಅತಿಭಂಗಿ, ನೃತ್ಯ ಮೊದಲಾದ ಪ್ರಕಾರಗಳಿವೆ. ಮೂರ್ತಿ ಶಿಲ್ಪಗಳು ಯೋಗಾಸನ, ಅನಂತಾಸನ, ಸಿಂಹಾಸನ, ಭದ್ರಾಸನ, ವಿಮಾಲಾಸನ, ಪದ್ಮಾಸನ, ವಿರಾಸನ, ಸುಖಾಸನ, ಮೊದಲಾದ ಪ್ರಕಾರಗಳ ಭಂಗಿಯಲ್ಲಿ ಕಂಡುಬರುತ್ತವೆ.

### ಶಿಲ್ಪಗಳಲ್ಲಿನ ಆಯುಧಗಳು

ಶಿಲ್ಪಗಳ ಕೈಯಲ್ಲಿರುವ ಆಯುಧಗಳು ಭಿನ್ನ ಭಿನ್ನವಾಗಿರುತ್ತವೆ. ೨,೪,೮,೧೦,೧೨ ಕೈಗಳಿರುವಂತಹ ಶಿಲ್ಪಗಳನ್ನು ಕಾಣಬಹುದು. ಸಾತ್ವಿಕ ವೀರ, ಶಾಂತಶಿಲ್ಪಗಳಲ್ಲಿ ೨ ಇಲ್ಲವೇ ನಾಲ್ಕು ಕೈಗಳಿರುತ್ತವೆ. ರಜತ, ತಾಮಸ, ಶಿಲ್ಪಗಳಲ್ಲಿ ೬-೮ ಕೈಗಳಿರುತ್ತವೆ, ಈ ಶಿಲ್ಪಗಳಲ್ಲಿ ಶಂಖ, ಚಕ್ರ, ಗಧಾ, ತ್ರಿಶೂಲ, ಡಮರು, ಶೂಲ,

ಟಂಕ, ಪಾಶ, ಖಟ್ವಾಂಗ, ಖಡ್ಗ, ಧನಸ್ಸು, ಬಾಣ, ಅಂಕುಶ, ವಜ್ರಶಕ್ತಿ, ಪರಶು, ನೇಗಿಲು, ಅಗ್ನಿ ಮೊದಲಾದ ಆಯುಧಗಳು ಕಂಡುಬರುತ್ತವೆ.[೩೩] ವಿಷ್ಣುವಿನ ಶಂಖ, ಚಕ್ರ, ಗಧಾ, ಪದ್ಮ, ಶಿವನಿಗೆ ತ್ರಿಶೂಲ, ಡಮರು, ಅಗ್ನಿ, ಗಣಪತಿಗೆ ಪಾಶ, ಅಂಕುಶ, ಲಕ್ಷ್ಮಿಗೆ ಪದ್ಮ, ಬಲರಾಮನಿಗೆ ನೇಗಿಲು, ಪರಶುರಾಮನಿಗೆ ಪರಶು, ರಾಮನಿಗೆ ಬಿಲ್ಲು, ಕಾರ್ತಿಕೇಯನಿಗೆ ಶೂಲ, ಟಂಕ, ವಜ್ರ ಬ್ರಹ್ಮನಿಗೆ ಕಮಂಡಲ, ಹೀಗೆ ಶಿಲ್ಪಶಾಸ್ತ್ರದಲ್ಲಿ ಒಬ್ಬೊಬ್ಬ ದೇವರಿಗೂ ನಿರ್ದಿಷ್ಟವಾದ ಆಯುಧಗಳಿರುವುದನ್ನು ಮತ್ತು ಒಂದೊಂದು ಆಯುಧಗಳಿಗೂ ಇರುವುದನ್ನು ಸೂಚಿಸುತ್ತವೆ.[೩೪] ವಿವಿಧ ಶಕ್ತಿ ಗುಣಗಳು ಕೆಲವು ಆಯುಧಗಳಿಗೆ ಪ್ರತ್ಯೇಕವಾದ ಮೂರ್ತಿರೂಪ ಕೊಟ್ಟಿದ್ದು ಅವುಗಳಿಗೆ ಆಯುಧ ಪುರುಷರೆಂದು ಕರೆಯಲಾಗಿದೆ.[೩೫]

**ಆಭರಣಗಳು**

ಸಾಮಾನ್ಯವಾಗಿ ಮೂರ್ತಿಗಳು ಆಭರಣಗಳಿಂದ ಅಲಂಕೃತವಾದವುಗಳೇ ಆಗಿರುತ್ತವೆ. ಶಿಲ್ಪಗಳನ್ನು ಅಲಂಕರಿಸಿದರೆ ಅಸಾಧಾರಣವಾದ ಶಕ್ತಿಯೊಂದು ಒದಗಿಬರುತ್ತದೆ ಎಂಬ ಭಾವನೆ ಪ್ರಾಚೀನ ಕಾಲದಿಂದಲೂ ಬಂದಿದೆ. ಶಿಲ್ಪ ಶಾಸ್ತ್ರಗಳು ಮೂರ್ತಿ ಶಿಲ್ಪಗಳು ಸರ್ವಾಂಗ ಸುಂದರವಾಗಿ ವಸ್ತ್ರಾಭರಣಗಳಿಂದ ಭೂಷಿತವಾಗಿರಬೇಕೆಂದು ಸೂಚಿಸುತ್ತವೆ.[೩೬] ದೇವತಾ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕಿರೀಟ, ಮುಕುಟ, ಜಟಾ, ಮುಕುಟ ಕರಂಡ, ಜಟಾಬಂಧ, ಶಿಲಾಮಣಿ, ಕೇಶಬಂಧ, ಮಹಾಕುಂಡಲ, ಪತ್ರಕುಂಡಲ, ರತ್ನಮಾಲೆ, ಮಣಿಸರ, ಕಂಠಹಾರ, ಶಿಲಾಮಣಿ, ಕೇಶಬಂಧ, ಮಹಾಕುಂಡಲ, ಉದರಬಂಧ, ಉಪವೀತ, ಕಂಕಣ, ಮಣಿಬಂಧ, ರತ್ನಾಮಾಲ, ನೂಪುರ, ಪಾದಜಾಲಕ, ಭುಜಂಗವಲಯ, ಪ್ರಭಾಮಂಡಲ, ಕೊರಳ ಸರ, ಬೆರಳುಂಗುರಗಳು, ಮೊದಲಾದ ಪ್ರಕಾರ ವಸ್ತ್ರಾಭರಣಗಳು ಕಂಡುಬರುತ್ತವೆ.[೩೭]

**ಲಾಂಛನ**

ಬ್ರಹ್ಮನಿಗೆ ಹಂಸ, ಶಿವನಿಗೆ ವೃಷಭ, ವಿಷ್ಣುವಿಗೆ ಗರುಡ, ಗಣಪತಿಗೆ ಮೂಷಿಕ, ದುರ್ಗೆಗೆ ಸಿಂಹ, ಸುಬ್ರಹ್ಮಣ್ಯನಿಗೆ ನವಿಲು, ದತ್ತಾತ್ರೇಯನಿಗೆ ನಾಯಿ, ಸರಸ್ವತಿಗೆ ನವಿಲು, ಲಕ್ಷ್ಮಿಗೆ ಪದ್ಮ, ಕೌಮಾರಿಗೆ ಮಯೂರ, ಚಾಮುಂಡಿಗೆ ಸಿಂಹ, ವರಾಹಿಗೆ ಮಹಿಷಾ, ಹೀಗೆ ಆಯಾ ಮೂರ್ತಿಶಿಲ್ಪಗಳಿಗೆ ತನ್ನದೇ ಆದ ಲಾಂಛನಗಳಿರುತ್ತವೆ. ಪ್ರಸ್ತುತ ಕೋರಾ ಪರಿಸರದಲ್ಲಿ ಶೈವ, ವೈಷ್ಣವ ಹಾಗೂ ಶಾಕ್ತ ಪಂಥಗಳ ಶಿಲ್ಪಗಳು ಕಂಡುಬಂದಿವೆ. ಈ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಸುಖಾಸೀನ ಶಿಲ್ಪಗಳು**

ಈ ಶಿಲ್ಪಗಳಲ್ಲಿ ಶಿವನು ಭದ್ರಪೀಠದ ಮೇಲೆ ಸವ್ಯ ಲಲಿತಾಸನದಲ್ಲಿ ಆಸೀನನಾಗಿರುವ ಶಿವ ಜಟಾಧಾರಿಯಾಗಿ ಸರ್ಪಾರಣಧಾರಿಯೂ ಚತುರ್ಭುಜಗಳನ್ನು ಹೊಂದಿರುತ್ತಾನೆ. ಆತನ ಎರಡೂ ಕೈಗಳಲ್ಲಿ ಪರಶು, ಡಮರು ಮತ್ತೆರಡು ಕೈಗಳು ಅಭಯಮುದ್ರೆಯಲ್ಲಿರುತ್ತದೆ. ಪಕ್ಕದಲ್ಲಿ ಪಾರ್ವತಿ, ಸ್ಕಂದ ಶಿಲ್ಪವಿದ್ದರೆ ಈ

ಶಿಲ್ಪವನ್ನು ಸೋಮಸ್ಕಂದ ಶಿಲ್ಪವೆಂದು ಶಿವನ ಜಟಾಮುಕುಟ ಚಂದ್ರನನ್ನು ಧರಿಸಿ ಕೈಯಲ್ಲಿಲ ನೀಲೋತ್ಸವ ಮತ್ತು ಸರ್ಪ ಹಿಡಿದಿರುತ್ತಾನೆ. ಪಕ್ಕದಲ್ಲಿ ನಂದಿವಾಹನವಿರುತ್ತದೆ.

**ನಂದಿಶಿಲ್ಪಗಳು**

ಪ್ರಸ್ತುತ ಪರಿಸರದ ಪ್ರತಿಯೊಂದು ಊರಿನಲ್ಲೂ ತನ್ನ ಪ್ರಾಚೀನತೆಯನ್ನು ಕಾಯ್ದುಕೊಂಡಿರುವ ನಂದಿಶಿಲ್ಪಗಳನ್ನು ಕಾಣಬಹುದು. ನಂದಿ, ಶಿವನ ವಾಹನ, ಪುರಾಣಗಳಲ್ಲಿಯೂ ಶಿವನ ವಾಹನ ನಂದಿ ಎಂಬ ಪ್ರಸ್ತಾಪವಿದೆ. ನಂದಿಯ ಬೆನ್ನ ಮೇಲೆ ಡುಬ್ಬ ಪರ್ವತಾಕಾರವಾಗಿದ್ದು ಅದು ಮುಂದಣ ಕಾಲದಲ್ಲಿ ಲಿಂಗದೊಂದಿಗೆ ತಾದಾತ್ಮ್ಯವನ್ನು ಪಡೆಯಿತು. ಲಿಂಗದ ಆಕಾರದ ಡುಬ್ಬ ನಂದಿಯ ಬೆನ್ನ ಮೇಲೆ ಇರುವುದರಿಂದ ಶಿವಲಿಂಗ ಎಂದೆನಿಸಿಕೊಳ್ಳುತ್ತದೆ. ಪ್ರಸ್ತುತ ಕೋರಾ ಪರಿಸರದಲ್ಲಿ ನಂದಿ ಶಿಲ್ಪಗಳು ಶಿವಾಲಯದ ಅಂತರಾಳ ಅಥವಾ ನವರಂಗದಲ್ಲಿವೆ. ಈ ಶಿಲ್ಪಗಳನ್ನು ಬೆಣಚುಕಲ್ಲಿನಲ್ಲಿ ಕೆತ್ತಲ್ಪಟ್ಟಿವೆ. ಸೋಮೇಶ್ವರ ದೇವಾಲಯದ ಸಭಾಮಂಟಪದಲ್ಲಿ ಮತ್ತು ರಾಮೇಶ್ವರ ದೇವಾಲಯದ ಸಭಾಮಂಟಪದಲ್ಲಿ ಸುಮಾರು ೩-೪ ಅಡಿಯ ನಂದಿ ಶಿಲ್ಪಗಳನ್ನು ಕಾಣಬಹುದು. ಈ ಶಿಲ್ಪಗಳು ಕ್ರಿ.ಶ. ೧೭-೧೮ನೇ ಶತಮಾನದ ನಂದಿಶಿಲ್ಪಗಳಾಗಿವೆ. ಈ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಹಣೆಯಲ್ಲಿ ಕುಚ್ಚಿನ ಪದಕ, ಕುತ್ತಿಗೆಗೆ ಘಂಟೆ ಸರ, ಉದರ ಪಡಿಕೆ, ಮೊದಲಾದ ವಸ್ತ್ರಾಭರಣಗಳಿರುವುದ ಸಾಮಾನ್ಯ ಲಕ್ಷಣಗಳಾಗಿವೆ.

**ಭೈರವ ಶಿಲ್ಪಗಳು**

ಶಿವ ಪುರಾಣದ ಪ್ರಕಾರ ಭೈರವ ಸಂಹಾರ ಮೂರ್ತಿಗಳಲ್ಲಿ ಒಬ್ಬನಾಗಿದ್ದಾನೆ. ಭೂತ ಪ್ರೇತಗಳ ಉಚ್ಚಾಟನೆಗೆಂದು ಭೈರವನ ಪೂಜೆ ಪ್ರಸಿದ್ಧವಾಗಿದೆ. ಕೈಯಲ್ಲಿ ಕಪಾಲವನ್ನು ಹಿಡಿದು, ದಂಡಪಾಣಿಯಾಗಿ ಪರ್ವವನ್ನು ಯಜ್ಞೋಪವೀತವಾಗಿ ಧರಿಸಿ ಯಾಗವನ್ನು ನಾಶಪಡಿಸುವ ಭೈರವನನ್ನು ಕ್ಷೇತ್ರಪಾಲನೆಂದು ಕರೆಯಲಾಗಿದೆ. ಆತನೊಂದಿಗೆ ನಾಯಿ ಇರುತ್ತದೆ. ತಾಮಸಿಕ ಭೈರವನು ಅಷ್ಟಭುಜಗಳನ್ನು ಹೊಂದಿರುತ್ತಾನೆ. ಇವರಿಬ್ಬರ ಕೊರಳಲ್ಲಿ ರುಂಡಮಾಲೆ ಇರುತ್ತದೆ. ಈ ರೀತಿಯ ಭೈರವ ಶಿಲ್ಪಗಳು ಪ್ರಸ್ತುತ ಪರಿಸರದಲ್ಲಿ ಕಂಡುಬಂದಿಲ್ಲ.

**ಕಾರ್ತಿಕೇಯ ಶಿಲ್ಪಗಳು**

ವೈಷ್ಣವ ದೇವರುಗಳಲ್ಲಿ ಶಿವನಿಗೆ ವಿಶೇಷವಾದ ಸ್ಥಾನವಿದೆ. ಶಿವನ ಮುಖದಿಂದ ಹೊರಹೊಮ್ಮಿದ ಆರುಕಳೆಗಳ ತೇಜಸ್ಸನ್ನು ಅಗ್ನಿ ಮತ್ತು ವಾಯು ತೆಗೆದುಕೊಂಡು ಹೋಗಿ, ಶರವಣ ಸರೋವರದಲ್ಲಿ ರಿಸಿದ್ದರಿಂದ ಅದು ಶರವಣಭವವಾಯಿತು. ಅಲ್ಲಿ ಆರು ಜನ ಕೃತಿಕೆಯರು ಅದನ್ನು ಬೆಳೆಸಿದ್ದರಿಂದ ಕಾರ್ತಿಕೇಯನಾದನು. ಮೊದಲು ಪ್ರಪ್ರಥಮರೂಪ ಮುರುಗನ್ ಪಾರ್ವತಿ ಮುರುಗನನ್ನು ಶರವಣ ಸರೋವರದಲ್ಲಿ ನೋಡಿ ಅವನ ೬ ಕಳೆಗಳನ್ನು ಅಪ್ಪಿಕೊಂಡಾಗ ಅವೆಲ್ಲವೂ ಸೇರಿ ಸ್ಕಂದನ ರೂಪವಾಯಿತು. ಅನಂತರ ಅವನಿಗೆ ಹಾಲುಣಿಸಿ ಶಿವ ಪಾರ್ವತಿಯರು ತಮ್ಮ ಮಧ್ಯದಲ್ಲಿ ನಿಲ್ಲಿಸಿಕೊಂಡರು. ಆಗ ಆತನು

ಸೋಮಸ್ಕಂದನಾದನು. ಶೂರಪದ್ಮ ಮಾವಿನ ಮರದ ರೂಪದಲ್ಲಿ ಸಮುದ್ರದಡಿಯಲ್ಲಿ ಅಡಗಿಕೊಂಡನು. ಕುಮಾರನು ಮೇಲಾಯುಧದಿಂದ ಆ ಮಾವಿನ ಮರವನ್ನು ಉರುಳಿಸಿದಾಗ ಅಸುರರ ಶರೀರ ಇಬ್ಭಾಗವಾಗಿ ಒಂದು ಭಾಗ ನವಿಲಿನಂತೆ ಮತ್ತೊಂದು ಭಾಗ ಕೋಳಿಯಂತೆ ಕಾಣಿಸಿಕೊಂಡವು. ಕುಮಾರನು ನವಿಲನ್ನು ತನ್ನ ವಾಹನವನ್ನಾಗಿಯೂ ಕೋಳಿಯನ್ನು ತನ್ನ ಧ್ವಜವನ್ನಾಗಿಯೂ ಮಾಡಿಕೊಂಡನು.[೩೮] ದಕ್ಷಿಣ ಭಾರತದಲ್ಲಿ ಕಾರ್ತಿಕೇಯ, ಶೇಯೋನ್, ಮುರುಗ, ಷಣ್ಮುಖ, ಮಹಾಸೇನ, ಕುಮಾರ ಬಾಲಸ್ವಾಮಿ, ವೇಲನ್, ದಂಡಪಾಣಿ, ಮಲ್ಲಿನಾಯಕ, ದೇವಸೇನಾಪತಿ, ಸೇನಾನಿ, ಗುಹ, ಗುರುಗುಹ, ಶಿವಗುರು, ದೇಶಿಕ, ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ.[೩೯] ಪ್ರಸ್ತುತ ಪರಿಸರದಲ್ಲಿ ಕಾರ್ತಿಕೇಯ ಮೂರ್ತಿ ಶಿಲ್ಪವು ಲಭ್ಯವಾಗಿರುವುದಿಲ್ಲ.

**ಗಣೇಶ ಶಿಲ್ಪಗಳು**

ಇಲಿಯನ್ನು ವಾಹನವನ್ನಾಗಿ ಮಾಡಿಕೊಂಡಿರುವ ಗಣೇಶ ಶಿವ ಪಾರ್ವತಿಯರ ಮಗ. ಪುರಾಣ, ತಂತ್ರ, ಆಗಮ, ಬ್ರಾಹ್ಮಣ ಸೂತ್ರ, ಧರ್ಮಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖವಿದೆ. ಹಿಮಪರ್ವದ ತಪ್ಪಲಿನ ಕಾಮಕೇಳಿಯಲ್ಲಿ ನಿರತವಾಗಿದ್ದ ಗಜಗಳ ಮಿಥುನವನ್ನು ಕಂಡು ತಾವೂ ಕ್ರೀಡಿಸಬೇಕೆಂಬ ಅಲೌಖಿಕ ಆಸೆಯಿಂದ ಶಿವ ಪಾರ್ವತಿಯರು ಗಜರೂಪದಲ್ಲಿ ಕ್ರೀಡಿಸಿ ಫಲವಾಗಿ ಜನಿಸಿದವನೇ ಗಣೇಶ ಎಂದು ಆಗಮವೊಂದು ಉಲ್ಲೇಖಿಸಿದೆ.[೪೦] ಗಣೇಶನಿಗೆ ಪ್ರಾಚೀನ ಪರಂಪರೆಯಿದ್ದು ಆದಿ ದೇವತೆಗಳಲ್ಲಿ ಒಬ್ಬನಾಗಿದ್ದಾನೆ. ರುದ್ರನ ಪುತ್ರ, ವಿನಾಯಕನಾಗಿ ಮೆರೆದು ಬುದ್ಧಿಶೀಲ ಬೃಹಸ್ಪತಿಯಾಗಿದ್ದನು. ವೈದಿಕ ದೇವತೆಗಳೇ ಪುರಾಣ ಕಾಲದ ಗಜಮುಖ, ವಿನಾಯಕ, ಎಂಬುದು ವಿದ್ವಾಂಸರ ಅಭಿಮತವಾಗಿದೆ.[೪೧] ಪ್ರಾಚೀನ ಕಾಲದಲ್ಲಿ ಕೇವಲ ಒಂದು ವರ್ಗದವರ ಆರಾಧನೆಗೆ ಸೀಮಿತವಾಗಿದ್ದು ಪ್ರಸ್ತುತ ಎಲ್ಲ ಮತದವರೂ ಆರಾಧಿಸುತ್ತಾರೆ. ಭೂತಗಣನಾಯಕ ಎಂಬ ಪ್ರತಿನಾಮವೂ ಇದೆ.[೪೨]

ಪ್ರಸ್ತುತ ಪರಿಸರದಲ್ಲಿ ದೊರೆತಿರುವ ಗಣೇಶ ಶಿಲ್ಪಗಳು ಸ್ಥಾನಿಕ ಶಿಲ್ಪಗಳು, ಸಮಭಂಗಿ, ದ್ವಿಭಂಗಿ, ತ್ರಿಭಂಗಿಗಳಲ್ಲಿದೆ. ಅತೀ ಪ್ರಾಚೀನ ಶಿಲ್ಪಗಳ ಬಳಿ ಮೂಷಿಕವಿರುವುದಿಲ್ಲ. ಈತನಿಗೆ, ಗಜಮುಖ, ಶೂರ್ಪಕರ್ಣ, ಆನೆಯ ತಲೆ, ಮರದಂತಹ ಕಿವಿಗಳಿಲರುತ್ತವೆ. ಸೊಂಡಲಿನ ವಿನ್ಯಾಸ ಬಲಗಡೆ ಬಾಗಿರುತ್ತದೆ. ಆಯುಧಗಳಲ್ಲಿ ಮೋದಕ, ಅಂಕುಶ, ಪಾಶ, ಪರಶು, ಬಿಲ್ಲು, ದಂತ, ವಲಯ, ಅಂಗುಳಿಯ ನಾಣ್ಯ, ಮುದ್ರೆ, ಗದು ಶಿಲ್ಪ ಮುಂತಾದ ಆಯುಧಗಳು, ಅಗಲವಾದ ಹಾರ, ಮಕುಟ, ಕಿರೀಟ, ವೈಜಯಂತಿ ಹಾರ ಮುಂತಾದ ಆಭರಣಗಳನ್ನು ಧರಿಸಲಾಗಿದೆ. ಈ ಶಿಲ್ಪಗಳನ್ನು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಇಂತಹ ಶಿಲ್ಪಗಳು ಕೋರಾ, ಗೊಲ್ಲಹಳ್ಳಿಯಲ್ಲಿ ದೊರೆತ್ತಿದ್ದು ಇವುಗಳು ಕ್ರಿ.ಶ. ೩–೪ನೇ ಶತಮಾನದ ಗೋಕರ್ಣ ಮತ್ತು ಬನವಾಸಿ ಶಿಲಾ ಮೂರ್ತಿಗಳನ್ನು ನೆನಪಿಗೆ ತರುತ್ತವೆಯಾದರೂ ಅವುಗಳಿಗಿಂತ ರಚನೆಯಲ್ಲಿ ಸ್ವಲ್ಪ ಭಿನ್ನವಾಗಿವೆ.

## ವೀರಭದ್ರನ ಶಿಲ್ಪ

ದಕ್ಷ ಬ್ರಹ್ಮನ ಮಗಳಾದ ದಾಕ್ಷಾಯಣಿ ಶಿವನ ಧರ್ಮಪತ್ನಿ ದಕ್ಷಬ್ರಹ್ಮ ಶಿವನೆಡೆಗೆ ಬಂದಾಗ ಸಭೆಯಲ್ಲಿ ಪತ್ನಿಯೊಂದಿಗೆ ಮಗ್ನನಾದ ಆತನಿಂದ ಪ್ರೀತ್ಯಾದರಗಳು ದೊರೆಯಲಿಲ್ಲವೆಂಬ ಕೋಪದಿಂದ ಆತನನ್ನು ತಾನು ಅವಮಾನಿಸಬೇಕೆಂದು ಯಜ್ಞ ನಡೆಸಲು ತೀರ್ಮಾನಿಸಿದ. ಈ ಯಜ್ಞಕ್ಕೆ ಎಲ್ಲಾ ದೇವತೆಯರನ್ನು ಆಹ್ವಾನಿಸಿ ಶಿವನನ್ನು ಆಹ್ವಾನಿಸಿರಲಿಲ್ಲ. ಯಜ್ಞ ಪ್ರಾರಂಭವಾದರೂ ದಾಕ್ಷಾಯಣಿಗೆ ಆಹ್ವಾನ ಬರಲಿಲ್ಲ. ಆದರೂ ದಾಕ್ಷಾಯಣಿ ಶಿವನ ಅನುಮತಿ ಪಡೆದು ಯಜ್ಞಕ್ಕೆ ಹೋಗುತ್ತಾಳೆ. ಅಲ್ಲಿ ಅವಳು ಅವಮಾನಿತಳಾಗಿ ಅದೇ ಯಜ್ಞಕುಂಡದಲ್ಲಿ ಬಿದ್ದು ಪ್ರಾಣ ಬಿಡುತ್ತಾಳೆ. ಆಗ ಕುಪಿತನಾದ ಶಿವ ಜಡೆಯನ್ನು ನೆಲಕ್ಕಪ್ಪಳಿಸಿ ದಕ್ಷನಯಜ್ಞವನ್ನು ಧ್ವಂಸ ಮಾಡಿ ಶಿರಚ್ಛೇದನ ಮಾಡುತ್ತಾನೆ. ಆಗ ದಕ್ಷನ ಪತ್ನಿ ಬೇಡಿಕೊಂಡಿದ್ದರಿಂದ ಟಗರಿನ ಮುಖವನ್ನು ಜೋಡಿಸಿ ಆತನನ್ನು ಬದುಕಿಸುತ್ತಾನೆ. ವೀರಭದ್ರನ ಈ ಹಿನ್ನಲೆ ವೈದಿಕ ಸಾಹಿತ್ಯ ಲಿಂಗ, ಸ್ಕಂದ, ಶಿವ, ಮತ್ಸ್ಯ, ವಿಷ್ಣು, ವಾಯು, ಬ್ರಹ್ಮಾಂಡ, ಭಾಗವತ ಪುರಾಣಗಳಲ್ಲಿ ಉಲ್ಲೇಖವಾಗಿದೆ.[೪೩] ೧೦೪೫ ರ ಹಾವೇರಿ ಶಾಸನದಲ್ಲಿ ವೀರಭದ್ರದೇವರ ಉಲ್ಲೇಖ ಪ್ರಥಮವಾಗಿ ಗೋಚರಿಸುತ್ತದೆ.[೪೪]

ಕೋರಾ ಪರಿಸರದ ಕೆಸ್ತೂರಿನ ವೀರಭದ್ರಸ್ವಾಮಿ ದೇವಾಲಯದಲ್ಲಿರುವ ವೀರಭದ್ರನ ಮೂರ್ತಿಶಿಲ್ಪವು ಬಹಳ ಸುಂದರವಾಗಿದೆ. ಇದು ವಿಶಿಷ್ಟ ಭಂಗಿಯಲ್ಲಿದೆ. ಕ್ರಿ.ಶ. ೧೬–೧೮ನೇ ಶತಮಾನದ ಶಿಲ್ಪವಾಗಿದೆ. ಈ ಮೂರ್ತಿ ಶಿಲ್ಪವು ೪ ಅಡಿ ಎತ್ತರವಾಗಿದ್ದು ಚತುರ್ಭುಜಗಳನ್ನು ಹೊಂದಿದೆ. ಒಂದು ಕೈಯಲ್ಲಿ ಬಿಲ್ಲು ಬಾಣಗಳು, ಮತ್ತೊಂದು ಕೈಯಲ್ಲಿ ಅಂಕುಶವನ್ನು ಮಗದೊಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯನ್ನು ಕೆಳಗಡೆ ಇಳಿಬಿಡಲಾಗಿದೆ. ರುಂಡಮಾಲೆಯನ್ನು ಸಹ ಧರಿಸಿದೆ. ವೀರಗಾಸೆ ತೊಟ್ಟಿದೆ. ಕಿರೀಟ, ಮುಕುಟ, ಕರ್ಣಕುಂಡಲ, ಯಜ್ಞಪವಿತ್ರ, ಭುಜವಲ್ಯ, ಕಾಲಿಗೆ ದಪ್ಪನೆಯ ಕಡಗ ಧರಿಸಿರುವನು. ಈ ಶಿಲ್ಪದ ಬಲ ಬದಿಯಲ್ಲಿ ಕೈಮುಗಿದು ನಿಂತ ದಕ್ಷಬ್ರಹ್ಮನ ವಿಗ್ರಹವಿದೆ.

## ವೈಷ್ಣವ ಶಿಲ್ಪಗಳು

ಮೂರ್ತಿ ಶಿಲ್ಪಗಳ ವೈಶಿಷ್ಟ್ಯತೆಯಲ್ಲಿ ವೈಷ್ಣವ ಮೂರ್ತಿ ಶಿಲ್ಪಗಳು ವಿಶಿಷ್ಟತೆಯಿಂದ ಕೂಡಿದವುಗಳಾಗಿವೆ. ವೈಷ್ಣವ ಧರ್ಮದ ಪಂಥಗಳಲ್ಲಿ ಭಾಗವತ ಪಂಥವೂ ಒಂದಾಗಿದೆ. ಇದರ ಪ್ರಾಚೀನತೆಯನ್ನು ಕ್ರಿ.ಪೂ. ಕೊನೆಯ ಕ್ರಿ.ಶ. ನಂತರದ ಮೊದಲ ಶತಮಾನಗಳಲ್ಲಿ ಗುರುತಿಸಬಹುದಾಗಿದೆ. ಈ ಕುಲದ ಪಂಚವೀರರನ್ನು ವಾಸುದೇವ, ಪ್ರದ್ಯುಮ್ನ, ಸಾಂಬ, ಅನಿರುದ್ಧ, ಮೂರ್ತಿ ರೂಪದಿಂದ ಆರಾಧಿಸುತ್ತಿರುವ ವಿಚಾರ ಪ್ರಸ್ತುತ ಅಧ್ಯಯನದ ಪುರಾತತ್ವ ಕುರುಹುಗಳಿಂದ ಗುರುತಿಸಬಹುದು.[೪೫]

ದ.ಭಾ. ಕ್ರಿ.ಪೂ. ೬ನೇ ಶತಮಾನದಿಂದ ಕ್ರಿ.ಶ. ೫ನೇ ಶತಮಾನದವರೆವಿಗೆ ಪಂಚವೀರರ ಆರಾಧನೆ ಇತ್ತು. ಬನವಾಸಿಯ ಕದಂಬರು, ತಲಕಾಡಿನ ಗಂಗರ ಕಾಲಕ್ಕಾಗಲೇ ಈ ಧರ್ಮ ವ್ಯಾಪಕವಾಗಿ

ಪ್ರಚಾರದಲ್ಲಿತ್ತು.[೨೪] ಬಾದಾಮಿ ಚಾಲುಕ್ಯರ ಪ್ರಾರಂಭದ ಕೆಲವು ಅರಸರು ವೈಷ್ಣವ ಧರ್ಮದ ಅನುಯಾಯಿಗಳಾಗಿ ತಮ್ಮ ಕಾಲದ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಹೆಚ್ಚಿನದಾಗಿ ವೈಷ್ಣವ ಶಿಲ್ಪಗಳ ಕೆತ್ತನೆಯನ್ನು ಕಾಣಬಹುದು.

ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರ ವರ್ಣನೆಗಳಿವೆ. ವಿಭವಾಂತರವೆಂದರೆ ನಿರ್ದಿಷ್ಟ ಉದ್ದೇಶಕ್ಕಾಗಿ ಭಗವಂತ ವೈಕುಂಠದಿಂದ ಭೂಮಿಗೆ ಇಳಿದು ಬರುವುದು ಎಂದರ್ಥ. ಅವತಾರ ಪುರುಷ ಕಥೆ, ಪುರಾಣ, ಶಿಲ್ಪಗಳಲ್ಲಿ, ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬುದ್ಧ ಮತ್ತು ಕುಲ್ಕ್ಯ ಎಂಬ ೧೦ ಅವತಾರಗಳ ಪ್ರಸ್ತಾವನೆ ಇದೆ.[೪೭] ಪ್ರಸ್ತುತ ಕೋರಾ ಹೋಬಳಿ ಪರಿಸರದಲ್ಲಿ ಕಂಡು ಬರುವ ಇಂತಹ ಶಿಲ್ಪಗಳ ಪ್ರತೀಮ ಲಕ್ಷಣಗಳನ್ನು ಈ ಕೆಳಕಂಡಂತೆ ಪ್ರಸ್ತಾಪಿಸಲಾಗಿದೆ.

### ವಿಷ್ಣುವಿನ ಶಿಲ್ಪಗಳು

ಕೋರಾ ಪ್ರದೇಶದ ದೇವಲಾಪುರದ ಹೊರವಲಯದಲ್ಲಿ ೫ ಅಡಿ ಎತ್ತರದ ವಿಷ್ಣುವಿನ ಸುಂದರಮೂರ್ತಿ ಶಿಲ್ಪವನ್ನು ಕಾಣಬಹುದು. ಇದು ಕಪ್ಪು ಮಿಶ್ರಿತ ನೀಲಿ ಕಲ್ಲಿನದು ಇದು ಚತುರ್ಭುಜವನ್ನು ಹೊಂದಿದ್ದು, ಆಯುಧಗಳು ಶಿಥಿಲವಾಗಿವೆ. ಇದು ಸ್ಥಾನಿಕ ಶಿಲ್ಪವಾಗಿದ್ದು ಸಮಪಾದದಲ್ಲಿದೆ. ಕಿರೀಟ, ಮಕುಟ, ಕರ್ಣಕುಂಡಲ, ಕಂಠಹಾರ, ಕಟಿವಸ್ತ್ರ, ತೋಳಬಂಧಿ, ಕೈಖಡಗ, ಮೊದಲಾದ ವಸ್ತ್ರಾಭರಣಗಳನ್ನು ಧರಿಸಿರುವುದು ಸಾಮಾನ್ಯವಾಗಿದೆ.

### ನರಸಿಂಹನ ವಿಗ್ರಹಗಳು

ಮೂರ್ತಿಶಿಲ್ಪಗಳಲ್ಲಿನ ನರಸಿಂಹವಿಗ್ರಹಗಳಲ್ಲಿ ಮೂರು ರೀತಿಯ ವೈವಿಧ್ಯತೆಯನ್ನು ಕಾಣಬಹುದು. ಪ್ರಸನ್ನ ಲಕ್ಷ್ಮೀನರಸಿಂಹ, ಉಗ್ರ ನರಸಿಂಹ, ಕಂಬದ ನರಸಿಂಹ ಈ ಮೂರು ಶಿಲ್ಪಗಳಲ್ಲಿ ಎರಡು ಶಿಲ್ಪಗಳು ಕೋರಾ ಮತ್ತು ಚಿಕ್ಕ ತೊಟ್ಲುಕೆರೆಯಲ್ಲಿ ದೊರೆತಿವೆ. ಇವು ೧೬ನೇ ಶತಮಾನದ ಶಿಲ್ಪಗಳಾಗಿವೆ. ಇವು ಸ್ಥಾನಿಕ ಭಂಗಿಯಲ್ಲಿದ್ದು ಚತುರ್ಭುಜನಾಗಿ ಕ್ರಮವಾಗಿ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಚಕ್ರ ಮತ್ತೊಂದು ಬಲಗೈಯಲ್ಲಿ ಅಭಯಮುದ್ರೆ, ಎಡಗೈನಲ್ಲಿ ಮತ್ತೊಂದು ಆಯುಧ, ಕಾಲಲ್ಲಿ ಗೆಜ್ಜೆ ಸರ, ಕೊರಳಹಾರ, ಮುಂತಾದ ಆಭರಣಗಳನ್ನು ಹೊಂದಿದ್ದು, ಕಪ್ಪು ಶಿಲೆಯಲ್ಲಿ ಕೆತ್ತಲಾಗಿದೆ.

### ಹನುಮಂತನ ಶಿಲ್ಪಗಳು

ವೈಷ್ಣವ ಶಿಲ್ಪಗಳಲ್ಲಿ ಹನುಮಂತನ ಶಿಲ್ಪಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿವೆ. ಆಗಮಗಳಲ್ಲಿ ಹನುಮಂತನನ್ನು ಆಂಜನೇಯನ ಮಗನೆಂದೂ ರುದ್ರಾಂಶ ಸಂಭೂತನೆಂದೂ, ಚಾಪಿರುದ್ರನೆಂದೂ, ಸೂರ್ಯಪುತ್ರನೆಂದೂ, ವಾಯು ಪುತ್ರನೆಂದೂ, ಮರದ್ಗುಣ ಗುಣಗಳಿಗೆ ಸಂಬಂಧಿಸಿದವನೆಂದೂ, ರಾಮ ಭಕ್ತನೆಂದೂ, ಮುಖ್ಯ ಪ್ರಾಣನೆಂದೂ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಮಧ್ವಾಚಾರ್ಯರು ಹನುಮಂತನ ಅವತಾರವೆಂದೂ ಹೇಳಲಾಗುತ್ತದೆ. ಮಾಧ್ವ

ಸಂಪ್ರದಾಯದ ಪ್ರಭಾವದಿಂದಾಗಿ ಹನುಮಂತನ ಶಿಲ್ಪಗಳು ಕನ್ನಡ ನಾಡಿನಲ್ಲಿ ಹರಡಿದವು. ವ್ಯಾಸತೀರ್ಥರು ಹನುಮಂತನ ಶಿಲ್ಪಗಳನ್ನು ಪ್ರತಿಷ್ಠಾಪನೆ ಮಾಡಿದರು. ಜಾನಪದರು ಹನುಮಂತನನ್ನು ದುಷ್ಟ ಶಕ್ತಿಗಳ ವಿನಾಶಕನಾಗಿ ಪ್ರತಿಯೊಂದು ಗ್ರಾಮದಲ್ಲಿ ಆರಾಧಿಸುವ ಪದ್ಧತಿ ಇದೆ. ಪ್ರಾಚೀನ ಕಾಲದಲ್ಲಿ ಅರಸರು ತಮ್ಮ ಸೈನಿಕರಲ್ಲಿ ರಾಜಭಕ್ತಿ ಮತ್ತು ಸಾಹಸ ಶೌರ್ಯ ಶಕ್ತಿಯನ್ನು ಮೂಡಿಸಲೆಂದು ಕೋಟೆ, ಪಟ್ಟಣ, ದ್ವಾರಗಳಲ್ಲಿ ಹನುಮಂತನ ಶಿಲ್ಪಗಳನ್ನು ಪ್ರತಿಷ್ಠಾಪಿಸುತ್ತಿದ್ದರು.[೬೮] ದಕ್ಷಿಣ ಭಾರತದ ಅನೇಕ ರಾಜಮನೆತನಗಳು ಆತನ ಚಿತ್ರಗಳನ್ನು ತಮ್ಮ ನಾಣ್ಯ, ಧ್ವಜ ಹಾಗೂ ಲಾಂಛನದಲ್ಲಿ ಚಿತ್ರಿಸುತ್ತಿದ್ದರು. ಕೋರಾ ಪರಿಸರದ ಪ್ರತಿಯೊಂದು ಹಳ್ಳಿಯಲ್ಲೂ ಹನುಮಂತನ ಆರಾಧನೆ ಸರ್ವೇ ಸಾಮಾನ್ಯವಾಗಿದೆ. ಹಿರೇಗುಂಡಗಲ್ಲಿನಲ್ಲಿ ೬ ಅಡಿ ಎತ್ತರದ ಹನುಮಂತನ ಶಿಲ್ಪವಿದೆ. ಒಂದು ಕೈಯನ್ನು ಸೊಂಟದ ಮೇಲೆ ಮತ್ತೊಂದು ಕೈಯನ್ನು ಅಭಯ ಹಸ್ತದ ರೂಪದಲ್ಲಿ ಕೆತ್ತಲಾಗಿದೆ. ಚಿನಗದ ಆಂಜನೇಯ ಶಿಲ್ಪವು ಒಂದು ಕೈಯಲ್ಲಿ ಬಿಲ್ಲುಬಾಣವಿದ್ದು ಮತ್ತೊಂದು ಕೈಯಲ್ಲಿ ಅಭಯ ಹಸ್ತವನ್ನು ನೀಡಲಾಗಿದೆ.

### ಶಾಕ್ತ ಪಂಥದ ಶಿಲ್ಪಗಳು

ಶಕ್ತಿದೇವತೆಗಳ ಆರಾಧನೆಯು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇದರ ಪ್ರಾಚೀನತೆಯನ್ನು ಹರಪ್ಪ, ಮಹೆಂಜೊದಾರೋ ನಾಗರೀಕತೆಯಿಂದಲೇ ಗುರುತಿಸಬಹುದಾಗಿದೆ. ಸಪ್ತಶತಿ ಅಥವಾ ಚಂಡಿ ಎಂಬ ಮಾರ್ಕಂಡೇಯ ಪುರಾಣದ ೨೦೦ ಶ್ಲೋಕಗಳು ಮಹಾಮಾತೆಯ ಅವತಾರವನ್ನು ಪ್ರಸ್ತಾಪಿಸಿವೆ. "ಶ್ರೀ ವಿದ್ಯಾವರ್ಣವ" ತಂತ್ರದಲ್ಲಿ ೮೫ ದೇವತಾ ಶಿಲ್ಪಗಳ ಪ್ರತಿಮಾ ಲಕ್ಷಣಗಳಿವೆ. ಸಮಸ್ತ ದೃಷ್ಟಿಗೆ ಮೂಲ ಕಾರಣ ಕರ್ತೃ ಶಕ್ತಿ ದೇವತೆ. ಶಕ್ತಿ ದೇವತೆಯ ಉಗಮದ ಬಗ್ಗೆ ಐತಿಹ್ಯವಿದೆ. ಶಕ್ತಿಯ ವಿವಿಧ ಅವತಾರಗಳಾದ ಚಂಡಿ, ಕಾಳಿ, ದುರ್ಗಿ, ಊರಮ್ಮ, ಲಕ್ಷ್ಮೀ, ಮಹಿಷಾಸುರ ಮರ್ದಿನಿ ಹೀಗೆ ನಾನಾ ಹೆಸರುಗಳಿಂದ ಪ್ರಖ್ಯಾತಿ ಪಡೆದಿದ್ದಾಳೆ. ಈ ಪಂಥ ಎಲ್ಲಾ ಕಾಲದಲ್ಲಿಯೂ ಜನ ಸಾಮಾನ್ಯರಲ್ಲಿ ಬೇರುಬಿಟ್ಟಿರುವ ಪಂಥವಾಗಿದೆ.

### ಬೊಮ್ಮನಳಮ್ಮನ ಶಿಲ್ಪ

ಈ ಶಿಲ್ಪವು ಗುಂಡಗಲ್ಲಿನ ಬೊಮ್ಮನಹಳ್ಳಿಯಲ್ಲಿ ಕಂಡುಬರುತ್ತದೆ. ಇದು ಮಹಿಷಾಸುರಮರ್ಧಿನಿಯ ಪ್ರತಿರೂಪದಂತಿದೆ. ೮ ಕೈಗಳನ್ನು ಹೊಂದಿದ್ದು ತನ್ನ ಕಾಲುಗಳಿಂದ ರಾಕ್ಷಸನನ್ನು ತುಳಿದು ಸಂಹರಿಸುವ ರೀತಿಯಲ್ಲಿದೆ. ಸ್ಥಾನಿಕ ಭಂಗಿಯಲ್ಲಿದ್ದು ಬಾಣ, ಶೂಲ, ಖಡ್ಗ, ಶಂಖ, ಧನಸ್ಸು, ಖೇಚಕ ಮುಂತಾದ ಆಯುಧಗಳನ್ನು ಹಿಡಿದಿದೆ. ದೇಹವನ್ನು ಮೆಟ್ಟಿ ತಲೆಯನ್ನು ಸಂಹರಿಸುವ ಚಿತ್ರಣವಿದೆ. ಕೊರಳಮಾಲೆ, ದಪ್ಪವಾದ ಕಣ್ಣುಗಳನ್ನು ಹೊಂದಿದ್ದು ಭಯವನ್ನು ಹುಟ್ಟಿಸುವ ರೀತಿಯಲ್ಲಿದೆ.

### ಲಕ್ಷ್ಮಿ ಶಿಲ್ಪಗಳು

ವೈದಿಕ ಸಂಸ್ಕೃತಿಯ ಪೂರ್ವದಲ್ಲಿ ಲಕ್ಷ್ಮಿಯು ಬೇಸಾಯಗಾರರ ಧಾನ್ಯ ದೇವತೆಯಾಗಿದ್ದಳು. ಋಗ್ವೇದದ ತ್ರಿಸೂಕ್ತಿ. ಶತಪಥಬ್ರಾಹ್ಮಣ, ಶಾಂಖಾಯನನ ಗೃಹಸೂತ್ರ ಮೊದಲಾದ ಕೃತಿಗಳಲ್ಲಿ ಲಕ್ಷ್ಮಿಯ ಉಲ್ಲೇಖಗಳಿವೆ. ಮಹಾಭಾರತದಲ್ಲಿ ದೇವಾಸುರರು ಅಮೃತದ ಆಸೆಯಿಂದ ಹಾಲ್ಗಡಲನ್ನು ಕಡೆದಾಗ ಅದರಲ್ಲಿ ಅತಿ ಅಲಂಕಾರ ಭೂಷಿತಳೂ ಸುಂದರಳೂ ಆದ ಕನ್ಯೆ ಬೆಣ್ಣೆಯಂತೆ ತೇಲಿ ಬಂದಳು. ಸಮುದ್ರ ಮಂಥನವನ್ನು ನೋಡುತ್ತಾ ನಿಂತಿದ್ದ ತ್ರಿಲೋಕ ಸುಂದರನಾದ ಅವಳನ್ನು ಕಂಡು ಮೋಹಿಸಿ ಕೈಹಿಡಿದು ವಕ್ಷಸ್ಥಲ ವಾಸಿನಿಯನ್ನಾಗಿ ಮಾಡಿಕೊಂಡನೆಂದೂ ಪ್ರಸ್ತಾಪವಿದೆ. ನಿಂಗಾಪುರದಲ್ಲಿ ಉಪ್ಪಿನಕೊಳಗ ವಕ್ಕಲಿಗ ಜನಾಂಗದವರು ಕೊಳಗ ಲಕ್ಷ್ಮೀ ಎಂದು ಆರಾಧನೆ ಮಾಡಿಕೊಂಡು ಬಂದಿದ್ದಾರೆ. ಈ ದೇವತೆಯನ್ನು ಕೊಳಗದಲ್ಲಿ ಕಳಶವನ್ನಿಟ್ಟು ಆರಾಧನೆ ಮಾಡಲಾಗುತ್ತದೆ. ಇದು ಅತೀ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬರುತ್ತಿದೆ.

### ೪.೩ ವೀರಗಲ್ಲುಗಳು

ಕನ್ನಡಿಗರು ಧಾರ್ಮಿಕ ನೆಲೆಗಟ್ಟಿನಿಂದಲೇ ಪ್ರಭಾವಿತಗೊಂಡಿದ್ದು. ಪ್ರಾಚೀನ ಕಾಲದಿಂದಲೂ ಸದ್ಗತಿ, ಮೋಕ್ಷ ಸಂಪಾದಿಸುವುದೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಬದುಕುತ್ತಿದ್ದಾರೆ. ಇದಕ್ಕೆ ಆತ್ಮಾನುಸಂಧಾನ, ಆದರ್ಶಾನುಸಂಧಾನ ಮತ್ತು ಮೌಲ್ಯಾನುಸಂಧಾನಗಳನ್ನು ಸಾಧನಗಳನ್ನಾಗಿ ಪರಿಭಾವಿಸಿಕೊಂಡಿದ್ದಾರೆ. ಆತ್ಮಾನುಸಂಧಾನದಿಂದ ಸಮಾಧಿಮರಣ, ಮೌಲ್ಯಾನುಸಂಧಾನದಿಂದ ಬಲಿದಾನ, ಸದ್ಗತಿ ಮತ್ತು ವೀರಮರಣ ಹೊಂದುವ ಸಮಾಜವು ರೂಢಿಸಿ ಬೆಳೆಸಿಕೊಂಡು ಬಂದಿರುವ ಆಚರಣೆಗಳಾಗಿವೆ.[೪೯] ಇಂತಹ ಅಸಮಾನ್ಯ, ವಿಶಿಷ್ಟ ಮರಣಗಳು ಪ್ರಾಚೀನ ಕಾಲದಿಂದಲೂ ಆಚರಣೆಯಲಿದ್ದನ್ನು ಗುರುತಿಸಬಹುದಾಗಿದ್ದು. ಇದರ ನೆನಪಿಗಾಗಿ ವೀರರ ಗುಡಿಗಳನ್ನುನಿರ್ಮಿಸುವ, ಹಾಗೆಯೇ ಮಹಾಸತಿಗಲ್ಲು ಮತ್ತು ನಿಷಿಧಿಗಲ್ಲುಗಳನ್ನು ಪ್ರತಿಷ್ಠಾಪಿಸುವ ಪದ್ಧತಿಯು ಪರಂಪರೆಯಾಗಿ ಬೆಳೆದು ಬಂದಿದೆ.

ವೀರನ ತ್ಯಾಗ, ಬಲಿದಾನ, ಮಹಾಸತಿಯರ ಆದರ್ಶ ಗುಣ, ಸನ್ಯಾಸಿಗಳ ಪಾರಮಾರ್ಥಿಕ ಗುಣಗಳನ್ನು ತಿಳಿಸುವ ಮಾಧ್ಯಮಕ್ಕೆ ಸ್ಮಾರಕ ಶಿಲ್ಪಗಳೆಂದು ಹೆಸರು.[೫೦] ಈ ಸ್ಮಾರಕ ಶಿಲ್ಪಗಳು ಮೂಲತಃ ವ್ಯಕ್ತಿಯ ಶೌರ್ಯದ ಪ್ರತೀಕವಾದರೂ ಅವು ನಾಡಿನ ಮೌಲ್ಯವನ್ನು ಪ್ರತಿಬಿಂಬಿಸುವ ಸೂಚನಾ ಫಲಕಗಳಾಗಿವೆ. ಯುದ್ಧವೀರ, ದಾನವೀರ, ಮಹಾಸತಿ ಮೊದಲಾದವರ ಆದರ್ಶಗಳನ್ನು ಸೂಚಿಸುವ ಮತ್ತು ಸಮಾಜದ ಮೌಲ್ಯಗಳನ್ನು ಜೀವಂತವಾಗಿ ಸೆರೆಹಿಡಿಯುವಲ್ಲಿ ಸ್ಮಾರಕ ಶಿಲೆಗಳು ಮಹತ್ವದ ಪಾತ್ರ ವಹಿಸಿವೆ. ಈ ವೀರಗಲ್ಲುಗಳನ್ನು ಹಾಕಿಸುತ್ತಿದ್ದ ಮೂಲ ಉದ್ದೇಶ ನಾಡಿನ ಜನತೆಯ ರಕ್ಷಣೆಗಾಗಿ ಹೋರಾಡಿ ಜೀವನ್ಮರಣ ಹೊಂದಿದ ವೀರನ ಅಥವಾ ವೀರಸ್ತ್ರೀಯಳ ಶೌರ್ಯ, ಪರಾಕ್ರಮ ಅನಕ್ಷರಸ್ಥರಿಗೂ ತಿಳಿಯಲಿ ಎಂಬ ಉದ್ದೇಶವಿರಬಹುದು.[೫೧] ಇಂತಹ ಸ್ಮಾರಕಗಳು ಅಂದಿನ ಮಾನವನರ ಜೀವನ ವಿಧಾನ, ಜೀವನದ ಬಗ್ಗೆ

ಮುನಿಗಳಂತೆಕುಂತಿಯರೂ ಈ ಪರಂಪರೆಯನ್ನು ಅನುಸರಿಸುತ್ತಾರೆ. ವ್ರತಾಚರಣೆಯ ಈ ವಿಧಾನವನ್ನು ಸಮಾಧಿ, ಸಲ್ಲೇಖನ, ಸನ್ಯಾಸನ, ಪಂಡಿತ ಪೌಗ್ಗಾಯಣ, ಪಂಚಪದ, ಆರಾಧನಾ ಮೊದಲಾದ ಪದಗಳಿಂದ ಕರೆಯುತ್ತಾರೆ.[೬೩] ಮರಣವನ್ನಪ್ಪಿದವರ ವಿನಯಾರ್ಥ ಪರೋಕ್ಷವಾಗಿ ನಿಲ್ಲಿಸಿದ ಶಿಲಾ ಫಲಕಗಳೇ ನಿಷಿಧಿಗಲ್ಲುಗಳಾಗಿವೆ.[೬೪] ಶಾಸನಗಳಲ್ಲಿ ನಿಷೇಧಿಕಾ, ನಿಶಿಧಿ, ನಿಶೇಧಿಗೆ, ನಿಷಧ್ಯಿಕಾ, ನಿಷಧಿ, ನಿಷೇಧಿ, ನಿಶಿದ್ಯಾಲಯ, ನಿಷಿದ್ಧಿ, ನಿಷಿಧಿಗೆ, ನಿಷ್ಯಾದ್ಯಾಂ, ನಿಷಿಧಿ, ನಿಸ್ತಿಗೆ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ.[೬೫]

ನಿಷಿಧಿ ಫಲಕಗಳಲ್ಲಿ ಸಾಮಾನ್ಯವಾಗಿ ಮುಖ ಅಥವಾ ಶ್ರಾವಕರ ಸಲ್ಲೇಖನ ವ್ರತದ ವಿಚಾರಗಳನ್ನು ಕೆಳಗಿನಿಂದ ಮೇಲಕ್ಕೆ ಅವರ ಪ್ರತಿರೂಪವನ್ನು ಉಬ್ಬು ಶಿಲ್ಪಿಗಳ ಮುಖಾಂತರ ನಿರೂಪಿಸಲಾಗುತ್ತದೆ. ಕೆಳಹಂತದಲ್ಲಿ ಶ್ರುತಪೀಠದ ಮೇಲಿರಿಸಿದ ಜಿನಶಾಸನದ ಪ್ರತಿನಿಧಿ ಇದ್ದು ಅದರ ಇಕ್ಕೆಲಗಳಲ್ಲಿ ಉಪದೇಶ ಮಾಡುವ ಮುನಿ ಮತ್ತು ಉಪದೇಶ ಪಡೆಯುತ್ತಿರುವ ಶಿಷ್ಯನ ನಿರೂಪಣೆಗಳಿರುತ್ತವೆ. ಮೇಲಣ ಹಂತದಲ್ಲಿ ತೀರ್ಥಂಕರ ಅವನ ಪಾರ್ಶ್ವಗಳಲ್ಲಿ ಸಮಾಧಿ ಮರಣ ನಂತರ ತೀರ್ಥಂಕರನ ಸನ್ನಿಧಿಯಲ್ಲಿ ಶಾಶ್ವತ ಉಪದೇಶ ಪಡೆಯುತ್ತಿರುವ ವ್ರತಸ್ಥರ ಚಿತ್ರಣಗಳಿರುತ್ತವೆ. ಈ ನಿಷಿಧಿಗಲ್ಲುಗಳ ಆಕಾರ ೧ ರಿಂದ ೪ ಹಂತದ ಶಿಲ್ಪ ಪಟ್ಟಿಕೆಗಳನ್ನೊಳಗೊಂಡ ಫಲಕದ ಆಕಾರದಲ್ಲಿರುತ್ತವೆ.೧೮ ಇವೆಲ್ಲವುಗಳೂ ನಿಷಿಧಿಗಲ್ಲುಗಳ ಸಾಮಾನ್ಯ ಲಕ್ಷಣಗಳಾಗಿವೆ. ಪ್ರಸ್ತುತ ಕೋರಾ ಪರಿಸರದಲ್ಲಿ ದೊರೆತ ನಿಷಿಧಿಗಲ್ಲುಗಳ ದಾಖಲೆಯನ್ನು ಇಲ್ಲಿ ಮಾಡಲಾಗಿದೆ.

| | | |
|---|---|---|
| ೧ ಹೆಸರು | : | ನಿಷಧಿಗಲ್ಲು |
| ಸ್ಥಳ | : | ಚಿಕ್ಕತೊಟ್ಟುಕೆರೆ |
| ಕಾಲ | : | ಕ್ರಿ.ಶ. ೧೫–೧೬ನೇ ಶತಮಾನ |
| ವಸ್ತು | : | ಕಣಶಿಲೆ |

ಈ ಸ್ಮಾಕರವನ್ನು ಮೂರು ಹಂತದಲ್ಲಿ ಖಂಡರಿಸಲಾಗಿದ್ದು ಕೆಳಹಂತದಲ್ಲಿ ತಪಸ್ಸಿಗೆ ನಿಂತ ಮುನಿ, ಮಧ್ಯ ಹಂತದಲ್ಲಿ ತಪಸ್ಸಿಗೆ ಕುಳಿತಿರುವುದು, ಕೊನೆಯ ಹಂತದಲ್ಲಿ ದೇವ ಸಾನ್ನಿಧ್ಯ ಸೇರಿರುವುದು.

| | | |
|---|---|---|
| ೨ ಹೆಸರು | : | ನಿಷೆಧಿಗಲ್ಲು |
| ಸ್ಥಳ | : | ಕೋರಾ ಹೊರವಲಯ |
| ಕಾಲ | : | ಕ್ರಿ.ಶ. ೧೫–೧೬ನೇ ಶತಮಾನ |
| ವಸ್ತು | : | ಕಣಶಿಲೆ |

ಇವು ಮಡಿದ ಜೈನರ ಪಾವಿತ್ರ್ಯತೆಯನ್ನು ತೋರಿಸುತ್ತವೆ. ಜೈನಮುನಿಗಳ ದರ್ಶನದ ಸಂಕೇತ ಮಾರ್ಗವಾಗಿ ಈ ಶಿಲ್ಪವು ಪ್ರತಿಬಿಂಬಿತವಾಗುತ್ತದೆ.

## ಬಲಿದಾನ ಶಿಲ್ಪಗಳು

ಧರ್ಮಕ್ಕಾಗಿ, ಆತ್ಮತೃಪ್ತಿಗಾಗಿ, ನಿಷ್ಠೆಗಾಗಿ ಅಥವಾ ತಾನು ನಂಬಿದ ಪ್ರೀತಿಯ ವಸ್ತುವಿನ ಅಗಲಿಕೆಯನ್ನು ತಡೆಯಲಾರದೆ ಬೆಂಕಿಗೆ ಅಥವಾ ಎತ್ತರದಿಂದ ತಗ್ಗಿಗೆ ಜಿಗಿದು ಅಥವಾ ತಾವೇ ಇರಿದುಕೊಂಡು ಪ್ರಾಣ ಕಳೆದುಕೊಂಡವರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕ ಶಿಲ್ಪಗಳೇ ಬಲಿದಾನ ಶಿಲ್ಪಗಳೆಂದು ಗುರುತಿಸಬಹುದಾಗಿದೆ.[೬೬]

## ೪.೪ ಶಾಸನಗಳು

ಯಾವುದೇ ಒಂದು ಪ್ರದೇಶದ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸಿವೆ. ಒಂದು ಘಟನೆಯನ್ನು ಕುರಿತು ಸಾಹಿತ್ಯ ಕೃತಿಗಳಿಂದ ಗೊಂದಲ ಉಂಟಾದಾಗ ಮೋರೆಹೊಗುವುದೇ ಶಾಸನಗಳಿಗೆ. ಶಾಸನಗಳ ವ್ಯವಸ್ಥಿತ ಅಧ್ಯಯನದ ಶಾಖೆಗೆ ಶಾಸನ ಶಾಸ್ತ್ರ [ಇರಿರಂಡಿಚಿಕಿಷಿಥಿ] ಎಂದು ಕರೆಯಾಗಿದೆ.[೬೭] ಭಾರತದಲ್ಲಿ ದೊರೆತ ಶಾಸನಗಳಲ್ಲಿ ಬಹು ಹೆಚ್ಚಿನದಾಗಿ ಕರ್ನಾಟಕದಲ್ಲೇ ಕಂಡು ಬಂದಿವೆ. ಈ ಶಾಸನಗಳು ಸಂಸ್ಕೃತ, ಪಾಳಿ, ಪ್ರಾಕೃತ, ತಮಿಳು, ಕನ್ನಡ ಮುಂತಾದ ಭಾಷೆಗಳಲ್ಲಿ ರಚನೆಯಾಗಿವೆ. ಹಾಗೂ ಬ್ರಾಹ್ಮಿ ಕರೋಷ್ಠಿ ಲಿಪಿಗಳನ್ನು ಬಳಸಲಾಗಿದೆ. ಈ ಶಾಸನಗಳು ಬಂಡೆಗಳ ಮೇಲ, ಸ್ತಂಭಗಳ ಮೇಲೆ ಮತ್ತು ಸುಟ್ಟ ಮಣ್ಣಿನ ಮುಂದ್ರೆಗಳು ಮುಂತಾದ ವಸ್ತುಗಳ ಮೇಲೆ ಕೊರೆಯಲ್ಪಟ್ಟಿವೆ.

ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯುವಲ್ಲಿ ಹಾಗೂ ಕಟ್ಟುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ಇತಿಹಾಸ ಗೊಂದಲವನ್ನು ನಿವಾರಿಸಿ ಪ್ರಮಾಣಿಭೂತವಾದ ಇತಿಹಾಸವನ್ನು ನಿರ್ಮಿಸುವಲ್ಲಿ ಇರುವ ಅತೀ ಪ್ರಮುಖವಾದ ಆಧಾರ ಸಾಕ್ಷಿಗಳೆಂದರೆ ಶಾಸನಗಳು ಇತರೆ ಆಧಾರಗಳಿಂದ ಕೆಲವು ವಿಷಯಗಳು ದೊರೆಯುತ್ತವಾದರೂ ಕರ್ನಾಟಕದ ರಾಜಕೀಯ ಹಾಗೂ ಸಾಮಾಜಿಕ ಚರಿತ್ರೆಯನ್ನು ತಿಳಿಸುವಂತಹದು ಶಾಸನಗಳೆ ಇತರೆ ಆಧಾರಗಳು ತುಂಬಿ ಕೊಡಲಾಗುದ ಕೆಲವು ಅಂಶಗಳನ್ನು ಕೆಲವು ಶಾಸನಗಳು ತಿಳಿಸಿಕೊಡುತ್ತವೆ.[೬೮] ಶಾಸನಗಳು ಸ್ಪಷ್ಟವಾದ ಮಾಹಿತಿಯನ್ನು ಒದಗಿಸಿಕೊಡುತ್ತವೆ. ಪ್ರಚಲಿತ ಕಾಲದಲ್ಲಿ ಶಾಸನ ಎಂಬ ಪದವು ಕಾನೂನು ಎಂಬ ಅರ್ಥವನ್ನು ಪಡೆದುಕೊಂಡಿದ್ದರೆ ಪ್ರಾಚೀನ ಕಾಳದಲ್ಲಿ ಈ ಪದವು ರಾಜಾಜ್ಞೆಯಾಗಿತ್ತು.[೬೯] ಶಾಸನ ಎಂಬ ಪದವು 'ಶಾಸ್' ಎಂಬ ಸಂಸ್ಕೃತ ಧಾತುವಿನಿಂದ ಬಂದಿದ್ದು, ಅಂದರೆ ಅಪ್ಪಣೆ ಮಾಡು ಘೋಷಣೆ ಹೊರಡಿಸು ಎಂಬ ಅರ್ಥವನ್ನು ಕೊಡುತ್ತದೆ.[೭೦] ಶಾಸನಗಳು ಕಾಲಾ ನಂತರದಲ್ಲಿ ತನ್ನ ಮಹತ್ವನ್ನು ಹೆಚ್ಚಿಸಿಕೊಳ್ಳುತ್ತಾ ಸಾಗಿತು ಎನ್ನಬಹುದು. ದಾನಧರ್ಮಗಳ ಪ್ರತಿಬಿಂಬಗಳಾದವು. ಈ ಒಂದು ರೀತಿಯ ಧಾನ ಧರ್ಮಗಳ ಪ್ರೇರಕ ಶಕ್ತಿಯಾದದ್ದರಿಂದಲೇ ದಾನಶಾಸನಗಳ ಸಂಖ್ಯೆ ಹೆಚ್ಚಾಯಿತು ಎಂದು ಹೇಳಬಹುದು.[೭೧] ಒಟ್ಟಾರೆ ದೇವಲಾಯಗಳಿಗೆ, ವಿದ್ವಾಂಸರಿಗೆ, ಗುರುಗಳಿಗೆ, ಮಠಗಳಿಗೆ ಹೊಲವನ್ನು ಹಣವನ್ನು ಆದಾಯದ ಭಾಗವನ್ನು ಬಿಟ್ಟುಕೊಟ್ಟ ವಿಷಯ ನಿರೂಪಿಸುವುದೇ ದಾನ ಶಾಸನಗಳ ಉದ್ದೇಶ.[೭೨] ಃಣಿಛಿಜಿಡುರಿಣುಠಟಿ ಎಂದರೆ ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ

ಬರಹ ಎಂದು ಅರ್ಥ ನೀಡುತ್ತಾರೆ. ತಾಳೆಗರಿ, ಭೋರ್ಜ್ವಪತ್ರ ಮುಂತಾದವುಗಳ ಮೇಲೆ ಕಂಡು ಬರುವ ಬರಹಗಳನ್ನು ಬಿಟ್ಟು ಬಹುಕಾಲ ಉಳಿಯು ಸಾಮಾಗ್ರಿಯ ಮೇಲೆ ಕೆತ್ತಿರುವ ಬರಹಗಳನ್ನು ಶಾಸನವೆಂದು ಸ್ಥೂಲವಾಗಿ ಕರೆಯಬಹುದು. ಭಾರತೀಯ ಪರಂಪರೆಯಲ್ಲಿ ಶಾಸನ ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯವನ್ನು ಗಮನದಲ್ಲಿಟ್ಟಿಕೊಂಡು ಶಾಸನವೆಂದರೆ ಆಜ್ಞೆ ಪ್ರಜೆಗಳೆಲ್ಲರೂ ಪಾಲಿಸಬೇಕಾದ ಸಂಹಿತೆ, ಸಂವಿಧಾನ, ನೀತಿನಿಯಮಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆಗೆ ಗುರಿಯಾಗುತ್ತಿರೆಂಬ ಎಚ್ಚರಿಕೆಯ ನೀತಿ ಸಂಹಿತೆಗಳ ಎಂದು ಅರ್ಥ ಪಡೆದುಕೊಂಡಿತು. ಶಾಸನಗಳಿಗೆ ಧಾರ್ಮಿಕ ಲೇಪನವನ್ನಚ್ಚಿ 'ಧರ್ಮ ಲಿಪಿಗಳೆಂದೂ' ಸಹ ಕರೆಯುತ್ತಾರೆ. ಅಶೋಕನ ತನ್ನ ಶಾಸನಗಳನ್ನು ಧರ್ಮಶಾಸನಗಳೆಂದು ಕರೆದುಕೊಂಡಿದ್ದಾರೆ. ಆದರೆ ಖಟಿಛಿಡುಛಜ ಎಂಬುದರಿಂದ ಹೊರಟ ಕೆತ್ತನೆ, ಕೊರೆ, ಕಂಡರಿಸು, ಎಂಬ ಅರ್ಥಕ್ಕೆ ಭಿನ್ನವಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಲಾಲೇಖ, ತಾಮ್ರಲೇಖ, ದಾಖಲೆ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ, ಕರಾರು, ಎಂಬ ವ್ಯಾಪಕ ಅಥವನ್ನು ಶಾಸನ ಪಡೆದುಕೊಂಡಿತು.[೨೩] ಶಾಸನಗಳನ್ನು ಬಂಡೆಗಲ್ಲು, ಶಿಲೆ ಹಾಗೂ ಧಾತುಗಳಿಂದ ತಾಮ್ರ, ಕಬ್ಬಿಣ ಬೆಳ್ಳಿ ಮುಂತಾದವುಗಳ ಮೇಲೆ ಕೆತ್ತುತ್ತಿದ್ದರು ಭಾರತದಲ್ಲಿ ದೊರೆತ ಶಾಸಗಳ ಪಟ್ಟಿಯಲ್ಲಿ ಕರ್ನಾಟಕದ್ದು ಸಿಂಹಪಾಲು ಕರ್ನಾಟಕದಲ್ಲಿ ಸಿಗುವಷ್ಟು ಶಾಸನಗಳು ಭಾರತದ ಬೇರೆಯಾದ ಪ್ರಾಂತ್ಯದಲ್ಲೂ ಸಿಗುವುದಿಲ್ಲ ಎಂಬುದು ವಿದ್ವಾಂಸರ ಅಭಿಮತ.[೨೪] ಕರ್ನಾಟದಲ್ಲಿ ಮೌರ್ಯನ ಕಾಲದಿಂದ ಹಿಡಿದು ಪಾಳೆಯಗಾರರ ನಂತರದ ಕಾಲದವರೆಗೂ ಅಪಾರ ಪ್ರಮಾಣದಲ್ಲಿ ಶಾಸನಗಳು ಲಭ್ಯವಾಗಿವೆ. ಅವುಗಳು ಆಯಾಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ನಿರ್ಮಿಸುವಲ್ಲಿ ತುಂಬಾ ಸಹಕಾರಿಯಾಗಿವೆ. ಇತರ ಶಾಸನಗೆ ಪ್ರಕಾರ ಹೋಲಿಸಿದರೆ ದಾನಶಾಸನಗಳದ್ದೇ ಮೇಲುಗೈ ಮಠಮಾನ್ಯ, ಅಗ್ರಹಾರ, ಬ್ರಾಹ್ಮಣರು, ಪುರೋಹಿತರು ಮುಂತಾದವರಿಗೆ ದಾನವನ್ನು ನೀಡಿರುವುದು ಅವಕ್ಕೆ ಸಾಕ್ಷಿಯಾಗಿ ಮುಖಂಡರಿಂದ ಶಾಸನವನ್ನು ಹಾಕಿಸುತ್ತಿದ್ದರು. ಮತ್ತು ಅದನ್ನು ಶಿಲೆಯಲ್ಲಿ ಕೊರೆಯಿಸಿ ಶಾಶ್ವತಗೊಳಿಸುತ್ತಿದ್ದರು.[೨೫] ದಾನಶಾಸನಗಳು ಒಂದು ಧಾರ್ಮಿಕ ವ್ಯವಸ್ಥೆಯ ಉದ್ಧಾರಕ್ಕೆ ಸಹಾಯಕವಾಗಿದ್ದು ಆರ್ಥಿಕ ವ್ಯವಸ್ಥೆಯ ಮೇಲೂ ಪ್ರಭಾವ ಬೀರಿದವು.

### ನಾಗೇನಹಳ್ಳಿಯಲ್ಲಿ ದೊರೆತಿರುವ ಶಿಲಾಶಾಸನ

ಕೋರಾ ಹೋಬಳಿ ಪರಿಸರದ ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟುವಲ್ಲಿ ಶಾಸನ ಆಧಾರಗಳ ದೊರೆತಿರುವುದು ಬಹಳ ವಿರಳವೆಂದು ಹೇಳಬಹುದು. ಆದರೂ ಕೋರಾ ನಾಡಿನ ಮುತ್ತಿನ ಮುಮ್ಮಡಿ ಎಳುನಾಡ ಪ್ರಭುಗಳ ಆಳ್ವಿಕೆಯ ಬಗ್ಗೆ ತಿಳಿದುಕೊಳ್ಳಲು ಹಸ್ತಪ್ರತಿಯನ್ನು ಹೊರತುಪಡಿಸಿ ಒಂದು ಶಿಲಾ ಶಾಸನವು ದೊರೆತಿದೆ. ಈ ಶಿಲಾಶಾಸನದ ಅಧ್ಯಯದಿಂದ ಹೆಚ್ಚಿನ ವಿಚಾರವು ತಿಳಿದುಬರುತ್ತದೆ. ಕೋರಾ ಪರಿಸರದ ಸಂಸ್ಥಾನ ರಾಜಧಾನಿ ತುಮಕೂರು ಎಂದೂ ಕೋರಾ ಇ.ಸಿ.೨ ಮಧುಗಿರಿ ತಾಲ್ಲೂಕು ೩೩ ಎಂದು ತಿಳಿದು ಬರುತ್ತದೆ. ಈ ಶಾಸನವು ಅಂದಿನ ಕೊರಟಗೆರೆ ಹೋಬಳಿಯ ನಾಗೇನಹಳ್ಳಿ ಗ್ರಾಮಕ್ಕೆ ಉತ್ತರಕ್ಕಿರುವ

ಮಲ್ಲಪ್ಪನ ಗುಡ್ಡದ ಬಳಿ ದೊರೆತಿದೆ. ಇದು ೫೩೪ ರ ಪ್ರಮಾಣದಲ್ಲಿ ವಿಸ್ತೀರ್ಣವನ್ನು ಹೊಂದಿದೆ. ಇದರಿಂದ ತಿಳಿದು ಬರುವ ಪ್ರಮುಖ ವಿಚಾರಗಳನ್ನು ಈ ಕೆಳಕಂಡಂತೆ ಕಾಣಬಹುದು.[೭೬]

ಶಾಸನದ ಕಾಲವನ್ನು ಸ್ವಷ್ಟವಾಗಿ ತಿಳಿಸುವ ಈ ಶಾಸನ ಶಾಲಿವಾಹನ ಶಕವರುಷ ೧೪೧೭ ರಾಕ್ಷಸ ಸಂವತ್ಸರದ ಮಾಘ ಬ ೧೪ ಶು ಶಿವರಾತ್ರಿ ಪುಣ್ಯಕಾಲದ ಅರ್ಥಾತ್ ಕ್ರಿ.ಶ. ೧೪೯೫ರ ಮಾಘ ಬ ೧೪ ಶಿವರಾತ್ರಿ ಪುಣ್ಯದಿನದ ಅಂದು ಕೋರಾ ನಾಡಿನ ಪ್ರದೇಶ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿತ್ತು. ವಿಜಯನಗರದ ರತ್ನಸಿಂಹಾಸನದ ಮೇಲೆ ವಿರಾಜಮಾನವಾಗಿದ್ದವನು ಕಂಠೀರವ ಸಾಳ್ವ ಇಮ್ಮಡಿ ನರಸಿಂಗರಾಯ ಇವನು ಒಂದನೇ ಸಾಳುವ ನರಸಿಂಹ (ಕ್ರಿ.ಶ.೧೪೮೫-೧೪೯೧)ನ ಎರಡನೇ ಮಗ ಇವನ ಅಣ್ಣ ಯುವರಾಜ ತಿಮ್ಮನನ್ನು ಅಧಿಕಾರದ ಆಸೆಯಿಂದ ಹತ್ಯೆ ಮಾಡಲಾಗುತ್ತದೆ. ಅನಂತರ ಇಮ್ಮಡಿ ನರಸಿಂಹನನ್ನು ಅಧಿಕಾರಕ್ಕೆ ತರಲಾಗುತ್ತದೆ. ಇದನ್ನು ಸೇನಾಧಿಪತಿ ನರಸಣ್ಣ ನಾಯಕನನ್ನು ವಿರೋಧಿಸಿದನು. ಇದರ ಪರಿಣಾಮವಾಗಿ ಶಾಸನದಲ್ಲಿ ಉಲ್ಲೇಖಗೊಂಡಿರುವ ಸಾಳುವ ಇಮ್ಮಡಿ ನರಸಿಂಹನನ್ನು ಸೇನಾಧಿಪತಿ ನರಸಿಂಹ ನಾಯಕ ಪೆನುಗೊಂಡೆಯಲ್ಲಿ ಬಂಧನದಲ್ಲಿಟ್ಟು ರಾಜಾಧಿಕಾರವನ್ನು ತಾನೇ ವಹಿಸಿಕೊಂಡನು.

ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ಸೇನಾಧಿಪತಿ ನರಸಣ್ಣ ನಾಯಕನೇ ವಿಜಯನಗರ ತುಳು ವಂಶದ ಆಳ್ವಿಕೆಯ ಮೂಲ ಪುರುಷ ವಿಜಯನಗರ ಇತಿಹಾಸದಲ್ಲೇ ಪ್ರಖ್ಯಾತನಾದ ಕೃಷ್ಣದೇವರಾಯನಂತೆ ಸೇನಾಧಿಪತಿ ನರಸಣ್ಣ ನಾಯಕನ ಭಂಟ ಅವರು ಹೇಳಿದ್ದನು ಚಾಚೂ ತಪ್ಪದೇ ಮಾಡುತ್ತಿದ್ದ ಶ್ರೀಮನ್ ಮಹಾರಾಜ ಪ್ರಭು ತಿಮ್ಮಣ್ಣ ಗೌಡರ ಮಗ ಕಲಿಯ ತಮ್ಮಯ್ಯ ಗೌಡರು ಸಿದ್ಧಯ್ಯ ಒಡೆಯರು ಬಸವರಾಜ ಒಡೆಯರಿಗೆ ಬರೆಸಿಕೊಟ್ಟ ಹರವಾದ್ದು ಧರ್ಮ ಶಾಸನ ಎಂದಿದೆ ಅಂದಿನ ಮಲ್ಲಿಕಾರ್ಜುನ ಒಡೆಯರ ಇಬ್ಬರು ಪುತ್ರಿಗೆ ಕೊಟ್ಟ ಧರ್ಮಶಾಸನ. "ಕೋರಾದ ನಾಡಪ್ರಭು ತುಮಕೂರು ರಾಜಧಾನಿಯೊಳಗಾದ ನಾಗೇನಹಳ್ಳಿ" ಎಂಬ ಗ್ರಾಮದವನು. ಈ ರೀತಿ ಕೋರಾ ಅರಸು ಮನೆತನವು ಶಿಲಾಶಾಸನದಲ್ಲಿ ಉಲ್ಲೇಖವಾಗಿರುವ ಏಕೈಕ ಶಾಸನವಾಗಿದೆ. ಈ ಶಾಸನದಲ್ಲಿ ಸ್ವಷ್ಟವಾಗಿ ಕೋರಾದ ನಾಡಿಗೆ ತುಮಕೂರು ರಾಜಧಾನಿಯಾಗಿತ್ತು. ಎಂದು ಸ್ಪಷ್ಟವಾಗಿ ತಿಳಿಸಿದ್ದು ೧೫ನೇ ಸಾಲಿನಲ್ಲಿ ಮಡಿದ ಯೋದನ ಹೆಸರು ಬಂದಿದ್ದರೂ ಅಸ್ಪಷ್ಟತೆಯಿಂದ ಕೂಡಿದ್ದು ೧೬ನೇ ಸಾಲಿನಲ್ಲಿ 'ಸೋಮೇಗಉತ' ಎಂದಿರುವುದರಿಂದ ಯುದ್ಧದಲ್ಲಿ ವೀರ ಸ್ವರ್ಗ ಸೇರಿದವನು 'ಸೋಮೆಗೌಡ' ಎಂದು ಸ್ಪಷ್ಟವಾಗುತ್ತದೆ. ನಾಗೇನಹಳ್ಳಿಯನ್ನು ಸೋಮಪುರ ಎಂದು ಹೆಸರಿಸಿದ್ದು ಈ ಶಾಸನ ಹಾಕಿಸಿದಾಗ ರಾಜನಾಗಿ ಇದ್ದನು ಸೇನಾಧಿಪತಿ ನರಸಿಂಗರಾಯ ಆದರೆ ಅಧಿಕಾರ ಇದ್ದದ್ದು ಸೇನಾಧಿಪತಿ ನರಸಿಂಗನಾಯಕನ ಹತ್ತಿರ ಕೋರಾ ಅರಸು ಮನೆತನದ ಸೋಮಗೌಡನ ಸಹೋದರನು ಶಿವರಾತ್ರಿಯ ಶುಭದಿನ ಈ ಪರವರ್ಗವನ್ನು ದಾನ ಮಾಡಿ ಶಾಸನವನ್ನು ಹಾಕಿಸಲಾಯಿತು ಎಂಬುದು ಈ ಶಾಸನದಿಂದ ತಿಳಿದು ಬರುತ್ತದೆ.

## ಅಹೋಬಲ ಅಗ್ರಹಾರದ ದಾನ ಶಾಸನದ ವಿವರಣೆ

ಈ ಪರಿಸರದಲ್ಲಿ ದಾನ ಶಾಸನಗಳು ಕಂಡುಬಂದಿದ್ದು ಇವುಗಳೆಲ್ಲವೂ ವಿಜಯನಗರ ಕಾಲಕ್ಕೆ ಸಂಬಂಧಿಸಿದೆ. ಇಲ್ಲಿ ದೊರೆತ ಈ ಸನ್ನದು ಪ್ರಕಾರ ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ ಹರಿಹರರಾಯನ ಪುತ್ರ ಬುಕ್ಕರಾಯವೆಂಬುವವರು ಶಾಲವಾಹನ ಶಕ ೧೩೫೭ನೇ ಸಾಧಾರಣ ನಾಮ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರದ ಅರ್ಥೋದಯದ ಪುಣ್ಯಕಾಲದಲ್ಲಿ ಅಹೋಬಲರಾಯನ ಪುತ್ರನಾದ ಕೃಷ್ಣಯಜ್ವಾ ಎಂಬುವರ ಪುತ್ರರಾದ ವೇದವೇದಾಂಗ ಪಡಿತರಾದ ಸುಬ್ಬಾದೀಕ್ಷಿತರೆಂಬುವರಿಗೆ ಘನಶೈಲ ಪ್ರಾಂತ್ಯದ ಕೋರಾ ರಾಷ್ಟ್ರಕ್ಕೆ ಸಂಬಂಧಪಟ್ಟಂತೆ 'ಆನೆಬಿದ್ದದರಿ' ಎಂಬ ಸ್ಥಳದಲ್ಲಿನ 'ಘಟದಳ್ಳಿ' ಎಂಬ ಗ್ರಾಮವನ್ನು "ಬುಕ್ಕರಾಯಪುರ" ಎಂಬ ಹೆಸರಿನಿಂದ ದಾನ ಮಾಡಿರುವುದಾಗಿ ತಿಳಿದು ಬರುತ್ತದೆ.[೨೨]

ಈ ದಾನವು ಕ್ರಿ.ಶ.೧೪೩೧ರ ಜನವರಿಯಲ್ಲಿ ಪಡೆದಿರಬಹುದೆಂದು ತಿಳಿಯಲಾಗಿದೆ. ವಿದ್ಯಾರಣ್ಯರ ಕಾಲ ೧೩೩೬ ರಿಂದ ೧೯೮೬ರ ವರೆಗಿನ ಅ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತೆಂಬುದು ಸರ್ವವಿಧಿತ ಅಲ್ಲದೆ ಶೃಂಗೇರಿ ಗುರು ಪರಂಪರೆಯ ಚರಿತ್ರೆಯಲ್ಲಿಯೂ ಬುಕ್ಕರಾಯ ಎಂಬುವರು ವಿದ್ಯಾರಣ್ಯ ಶಿಷ್ಯನಾಗಿ ಶೃಂಗೇರಿ ಸಮೀಪದಲ್ಲಿ ವಿದ್ಯಾರಣ್ಯಪುರವೆಂಬ ಗ್ರಾಮವನ್ನು ನಿರ್ಮಿಸಿ ವಿದ್ಯಾರಣ್ಯ ದೇವಾಲಯವನ್ನು ಕಟ್ಟಿಸಿದರೆಂದು ಉಲ್ಲೇಖವಿದೆ. ಈ ಎಲ್ಲಾ ಕಾರಣಗಳಿಂದ ಬುಕ್ಕರಾಯನೇ ಕ್ರಿ.ಶ.೪೩೧ ರಲ್ಲಿ ಸುಬ್ಬಾದೀಕ್ಷಿತರಿಗೆ ಬುಕ್ಕರಾಯಪುರವನ್ನು ದಾನಶಾಸನ ಮಾಡಿದರೆಂದು ಸ್ಪಷ್ಟವಾಗುತ್ತದೆ.

ಈ ದಾನ ಶಾಸನ ಮತ್ತೊಂದು ವಿಶೇಷವೆಂದರೆ ಕೃಷ್ಣದೇವರಾಜರ ಕಾಲದಲ್ಲಿ ಅದೇ ಸಾಧಾರಣ ಸಂವತ್ಸರದೆಂದು ತುಂಗಾಭದ್ರಾ ನದಿ ತೀರದಲ್ಲಿ ಆನೆಗೊಂದಿ ಸಮೀಪದಲ್ಲಿ ತುಲಾಭಾರ ಸಮಾರಂಭದಲ್ಲಿ ಸುಬ್ಬಾದೀಕ್ಷಿತರ ವಂಶಸ್ಥರು ಮತ್ತೊಮ್ಮೆ ಊರ್ಜಿತಗೊಳಿಸಿದ್ದಲ್ಲದೆ ಆದತ್ತಿ ಗ್ರಾಮಕ್ಕೆ ಮೇರೆಗಳನ್ನು ಹಾಕಿಕೊಟ್ಟರು ಎಂಬ ವಿಷಯವು ಈ ಶಾಸನದಿಂದ ತಿಳಿದುಬರುತ್ತದೆ.

## ಹೊಯ್ಸಳ ಕಾಲದ ದಾನ ಶಾಸನ : ಹಿರೇಗುಂಡಗಲ್

ಗಂಗ ಸಾಮ್ರಾಜ್ಯದ ಪತನ ನಂತರ ಹೊಯ್ಸಳರು ಕರ್ನಾಟದಲ್ಲಿ ಏಳಿಗೆಗೆ ಬಂದರು. ಇವರ ದೊರೆಯಾದ ಪ್ರತಾಪ ಚಕ್ರವರ್ತಿ ವೀರಬಲ್ಲಾಳ ದೇವರಸನ ಮಹಾಮಂತ್ರಿ ಪೊನ್ನಣ್ಣನ ಮಗ ಕಾಮಯ್ಯದಣ್ಣಾ ನಾಯಕನು ಕೋರಾ ನಾಡಿಗೆ ಸೇರಿದ್ದ ಹಿರೇಗುಂಡಗಲ್ಲಿನ ಮಸಣಿಗೌಡನ ಮಗ ಚಿಕ್ಕಣ್ಣನಿಗೆ ಕ್ರಿ.ಶ. ೧೩೨೩ ರಲ್ಲಿ ಇಡೀ ಗ್ರಾಮವನ್ನೇ ಕೊಡೆಯಾಗಿ ನೀಡಿದನು. ಹೀಗೆ ಗಂಗರ ಕಾಲದಲ್ಲಿ ಇಡೀ ಗ್ರಾಮದ ಆದಾಯವನ್ನು ಮರಿದಾಸ ಕಿರಿಯ ತಮ್ಮನಿಗೆ ನೀಡಿದ್ದನು. ಗಂಗಾ ಪತನದ ನಂತರ ಕೋರಾವು ಪ್ರಾಮುಖ್ಯತೆ ಪಡೆದುಕೊಂಡು ಹೊಯ್ಸಳರ ಕಾಲದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಂಡಿತು ಎನ್ನಬಹುದು. ಆಗ ಈ ಗ್ರಾಮವನ್ನು ಕೊಡುಗೆಯಾಗಿ ಬೇರೊಬ್ಬನಿಗೆ ನೀಡಿದರು. ಆದ್ದರಿಂದ ಈ ಕಾಲದಲ್ಲಿಯೂ ಕೂಡ ಒಬ್ಬನಿಗೆ

ಕೊಟ್ಟ ದಾನವನ್ನು ಕಿತ್ತುಕೊಂಡು ಮತ್ತೊಬ್ಬನಿಗೆ ನೀಡುತ್ತಿದ್ದುದ್ದರಿಂದಲೇ ಶಾಸನದ ಕೊನೆಯಲ್ಲಿ ಪಾಶಯ ವಾಕ್ಯಗಳನ್ನು ಹಾಕುವ ಸಂಪ್ರದಾಯ ಆರಂಭವಾಯಿತ್ತೆನ್ನಬಹುದು.[೭೮]

ಕ್ರಿ.ಶ.೧೩೩೮ರಲ್ಲಿ ಕೋರಾನಾಡನ್ನು ಆಳ್ವಿಕೆ ಮಾಡುತ್ತಿದ್ದ ಮಹಾನಾಡ ಪ್ರಭು ರಾಮೇಗೌಡನು ತನ್ನ ಮಗಳನ್ನು ಹೊಳಕಲ್ಲಿನಲ್ಲಿ ಹೊಯ್ಸಳರ ಮಹಾ ಸಾಮಂಧಾದಿಪತಿಯಾಗಿದ್ದ ಬೊಮ್ಮರ ನಾಯಕನ ಮಗ ಮೊಚಣ್ಣನಿಗೆ ಮದುವೆ ಮಾಡಿಕೊಟ್ಟು ತನ್ನಳಿಯನಿಗೆ ವರದಕ್ಷಿಣೆ ರೂಪದಲ್ಲಿ ಈ ಗ್ರಾಮವನ್ನೇ ನೀಡಿದನೆಂದು ಹಿರೇಗುಂಡಗಲಿನಲ್ಲಿರುವ ಶಾಸನದಿಂದ ತಿಳಿಯಬಹುದು. ಈ ಶಾಸನವನ್ನು ಊರಿನ ದೇವಾಲಯದ ಪಕ್ಕದಲ್ಲಿ ನಿಲ್ಲಿಸಲಾಗಿದೆ. ಈ ಶಾಸನದಿಂದ ಈ ಊರು ಅನೇಕ ಬಾರಿ ದಾನಗಳಿಗೆ ಬಳಗಾಗಿತ್ತು ನಂತರದ ದಿನಗಳಲ್ಲಿ ಕೋರಾ ನಾಡಿನ ಮಹಾನಾಡ ಪ್ರಭುಗಳ ಅಧೀನದಲ್ಲಿಯೇ ಇದ್ದು ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಹೋಬಳಿ ಕೇಂದ್ರವಾಗಿ ಇಂದಿಗೂ ಹೋಬಳಿಯ ಒಂದು ಗ್ರಾಮವಾಗಿಯೇ ಮುಂದುವರಿದಿದೆ.

**ಚಿನಗ ಗ್ರಾಮದ ದಾನ ಶಾಸನ**

ಕೋರಾ ಪ್ರದೇಶದ ಮತ್ತೊಂದು ಗ್ರಾಮವಾದ ಚಿನಗವನ್ನು ವಿಜಯನಗರ ಕಾಲದಲ್ಲಿ ದಾನಮಾಡಿರುವುದರ ಬಗ್ಗೆ ಇಲ್ಲಿ ದೊರೆತ ದಾನ ಶಾಸನದಿಂದ ತಿಳಿದು ಬಂದಿದೆ. ಸಂಗಮ ವಂಶದ ಹರಿಹರ ೨೨ ನ ಕಾಲದಲ್ಲಿ ಸುಮಾರು ಕ್ರಿ.ಶ.೧೩೯೫ ರಂದು ಈ ಊರಿನ ಹಿರಿಯ ನಾಯಕನಾದ ಸೋಮಣ್ಣ ನಾಯಕನಿಗೆ ದಾನ ಮಾಡಿರುವುದಾಗಿ ಇಲ್ಲಿನ ಊರಿನ ಹೊರವಲಯದಲ್ಲಿರುವ ಶಾಸನದಿಂದ ತಿಳಿದುಬಂದಿದೆ.

**ಹಿರೇಗುಂಡಗಲ್ಲಿನ ವೀರಗಲ್ಲು ಶಾಸನಗಳು**

ಈ ಗ್ರಾಮದಲ್ಲಿ ೧೮ ವೀರಗಲ್ಲು ಲಭ್ಯವಾಗಿದ್ದು ಇಡೀ ರಾಜ್ಯದಲ್ಲಿಯೇ ಒಂದೇ ಕಡೆ ಹೆಚ್ಚಿನ ವೀರಗಲ್ಲುಗಳ ಲಭ್ಯವಾಗಿರುವುದು ಈ ಸ್ಥಳದಲ್ಲಿಯೇ ಎಂದು ಹೇಳಬಹುದು. ಈ ವೀರಗಲ್ಲುಗಳು ೮ನೇ ಶತಮಾನ ಉತ್ತರಾರ್ಧಕ್ಕೆ ಸೇರಿದವುಗಳಾಗಿದ್ದು ರಾಷ್ಟ್ರಕೂಟರ ಮತ್ತು ಗಂಗರ ನಡುವಿನ ಯುದ್ಧವನ್ನು ವರ್ಣಿಸುತ್ತವೆ.

ರಾಷ್ಟ್ರಕೂಟರ ದೊರೆಯಾದ ಮೊದಲನೇ ಕೃಷ್ಣನು ತಲಕಾಡಿನಲ್ಲಿ ಆಳ್ವಿಕೆ ಮಾಡುತ್ತಿದ್ದ ಗಂಗರ ಮೇಲೆ ದಾಳಿ ಮಾಡಿದನು. ಆಗ ಅವನು ತನ್ನ ರಾಜ್ಯವನ್ನು ರಕ್ಷಿಸಲು ಸೇನಾ ಸಮೇತ ಆಗಮಿಸಿ ಹಿರೇಗುಂಡಗಲ್ಲಿನ ವಿಶಾಲವಾದ ಬಯಲು ಪ್ರದೇಶದಲ್ಲಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ರಾಷ್ಟ್ರಕೂಟರು ವಿಜಯಗಳಾಗಿ ತಲಕಾಡನ್ನು ಗೆದ್ದರೆಂದು ಈ ಶಾಸನಗಳು ತಿಳಿಸುತ್ತವೆ. ಈ ಗ್ರಾಮವು ಗಂಗ ಸಾಮ್ರಾಜ್ಯದ ಉತ್ತರದ ಗಡಿಭಾಗವಾಗಿದ್ದಿತು. ಈ ಯುದ್ಧದಲ್ಲಿ ಅನೇಕ ಸೈನಿಕರು ಮರಣ ಹೊಂದಿದರು. ಪರಿಣಾಮ ಇಲ್ಲಿ ಅನೇಕ ವೀರಗಲ್ಲು ಶಾಸನಗಳನ್ನು ನೆಡೆಲಾಯಿತೆಂದು ಈ ಶಾಸನವು ತಿಳಿಸುತ್ತದೆ.

ಈ ವೀರಗಲ್ಲು ಶಾಸನಗಳು ಗಂಗ ಸಾಮ್ರಾಜ್ಯದ ಪ್ರಸಿದ್ಧ ನಾಯಕನು ತನ್ನ ರಾಜ್ಯದ ದೊರೆಯಾದ ಎರಡನೇ ಶಿವಮಾರನೊಂದಿಗೆ ರಾಷ್ಟ್ರಕೂಟರ ದೊರೆ ಎಡರನೇ ಕೃಷ್ಣನೊಂದಿಗೆ ಕಾಗೆ ಮಗೆಯೂರು ಬಳಿ ಹೋರಾಟ ನಡೆಸಿದುದನ್ನು ದಾಖಲಿಸಿವೆ. ಕೆಲವು ವೀರಗಲ್ಲು ಶಾಸನಗಳು ರಾಷ್ಟ್ರಕೂಟರು ಗಂಗರನ್ನು, ಪಿಂಚನೂರು, ಕಾಗೆ ಮೋಗೆಯೂರು ಮತ್ತು ಬಾಗೆಯೂರು ಕದನಗಳಲ್ಲಿ ಪರಾಭವನೆಗೊಳಿಸದ್ದನ್ನು ತಿಳಿಸುತ್ತವೆ. ಇಲ್ಲಿ ದೊರೆತ್ತಿರುವ ೮ ವೀರಗಲ್ಲು ಶಾಸನಗಳು ಶ್ರೀ ಪುರುಷನ ಕಾಲಕ್ಕೆ ಸೇರಿದವುಗಳಾಗಿದ್ದು ವನ ದಂಡ ನಾಯಕ ಸಿಯಾಗಲ್ಲನ ಸಾಧನೆಗಳನ್ನು ಬಣ್ಣಿಸುತ್ತವೆ. ಅದರಲ್ಲಿ ಒಂದು ವೀರಗಲ್ಲು ಈರೀತಿ ಹೇಳಿದೆ "ಶ್ರೀ ಪುರುಷ ಮಹಾರಾಜ ಈ ಪ್ರಪಂಚವನ್ನು ಆಳುತ್ತಿದ್ದು ಮತ್ತು ಸಿಯಾಗಲ್ಲನು ಮರುಗಲೆನಾಡು ೨೦೦ಕ್ಕೆ ಅಧಿಕಾರಯಾಗಿದ್ದನು. ಮೂರು ಕೊಡೆಣ್ಣಿಯೂರ್ ಕಣ್ಣರಸನೊಂದಿಗೆ ಪಿಂಚನೂರು ಬಳಿ ನಡೆದ ಕದನದಲ್ಲಿ ಮರಣ ಹೊಂದಿದನು ಆದ್ದರಿಂದ ಅವನಿಗೆ ಕಣಮೋದಯ ವಾಲ್ಗಾಚ್ಚಾಗಿ ಹಿರೇಗುಂಡಗಲ್ ಬಳಿ ಭೂಮಿಯನ್ನು ದಾನಮಾಡಲಾಯಿತೆಂದು ತಿಳಿಸುತ್ತದೆ ಮತ್ತೊಂದು ವೀರಗಲ್ಲು 'ಕಡ್ಡಾನೆ' ಎಂಬುವನು ಈ ಪೃಥ್ವಿಯನ್ನು ಆಳುತ್ತಿರುವಾಗ 'ಸಿಯಾಗಲ್ಲು' ಎಂಬುವನು ಕೆಸುಮಣ್ಣು ನಾಡಿನ ಅಧಿಕಾರಿಯಾಗಿದ್ದನು. ಮಾಲತಿರಸನ ಮರಿದಾಸ ಕರಿಯತಮ್ಮ ಮತ್ತು ಅವನ ಮನೆಯ ಮಗ ನಾಗರತ್ತರಸ ಬಾಗೆಯೂರು ಬಳಿ ನಡೆದ ಕದನದಲ್ಲಿ ಮರಣ ಹೊಂದಿದನು. ಆದುದರಿಂದ ಕಠಾರಿ ವೀರನಾದ ಸಿಯಾಗೆಲ್ಲನು ತನ್ನ ಮತ್ತು ಮರಣ ಹೊಂದಿದವನ ಸ್ನೇಹದ ಕುರುಹಾಗಿ ಅವನ ಹೆಸರಿನಲ್ಲಿ ವೀರಗಲ್ಲುಗಳನ್ನು ಹಾಕಿಸಿ ಅವನ ಕುಟುಂಬಕ್ಕೆ ಹಿರೇಗುಂಡಗಲ್ ಗ್ರಾಮದ ಇಡೀ ಆದಾಯವನ್ನೇ ನೀಡಿದನು ಎಂಬುದಾಗಿ ತಿಳಿಸುತ್ತದೆ.[೭೯]

## ಅಡಿ ಟಿಪ್ಪಣಿಗಳು

೧. ಡಾ. ಬಾರಾ. ಗೋಪಾಲ್, ಕರ್ನಾಟಕದ ಕಲೆಗಳು, ಸಂ–೪, ಪು ಸಂ ೧

೨. ಪೋಮೋಕ್ತ, ಪು ಸಂ ೧

೩. ಗರುಡ ಪುರಾಣ, ಅಧ್ಯಾಯ ೪೬, ಪು ಸಂ –೨೮

೪. ಕರ್ನಾಟಕದ ಕಲೆಗಳು, ಸಂಪುಟ ೪, ಪು ಸಂ ೧

೫. ಅನಂತ ರಂಗಾಚಾರ್ ಎನ್., ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, ಪು ಸಂ ೩೦೮

೬. ಬಾಲಸುಬ್ರಹ್ಮಣ್ಯಂ, ಕುರುಗೋಡು, ಲೇ. ರಮೇಶನಾಯಕ, ಪು ಸಂ ೮೮

೭. ಪ್ರಭಾಕರನ್. ಎಸ್, ದೇವಾಲಯಗಳ ವಾಸ್ತು ಚಂದ್ರಿಕೆ ಪು ಸಂ ೫೫

೮. ಡಾ.ಬಾರಾ. ಗೋಪಾಲ್, ಕರ್ನಾಟಕದ ಕಲೆಗಳು, ಸಂಪುಟ.೪, ಪು ಸಂ ೧

೯. ಅದೇ, ಪು ಸಂ ೨

೧೦. ಅದೇ, ಪು ಸಂ ೪

೧೧. ದೇವರ ಕೊಂಡಾರೆಡ್ಡಿ: ಕನ್ನಡ ಅನುವಾದ ಭಾರತೀಯ ವಾಸ್ತ ವಿದ್ಯೆ, ಪು ಸಂ –೩–೫

೧೨. ಕರ್ನಾಟಕದ ಕಲೆಗಳು, ಸಂಪುಟ.೪ ೪೦ ಬಾ.ರಾ. ಗೋಪಾಲ್, ಪು ಸಂ ೧

೧೩. ದೇವರ ಕೊಂಡಾರೆಡ್ಡಿ, ಭಾರತೀಯ ವಾಸ್ತುವಿದ್ಯೆ, ಪು ಸಂ ೬

೧೪. ಬಾರಾ. ಗೋಪಾಲ್, ಕರ್ನಾಟಕದ ಕಲೆಗಳು, ಸಂಪುಟ ೪, ಪು ಸಂ ೪

೧೫. ವೇದಮೂರ್ತಿ.ಪಿ., ಪಾಲಯ್ಯ, ಚಳ್ಳಕೆರೆ ತಾ. ಪರಿಸರ ಸಾಂಸ್ಕೃತಿಕ ಅಧ್ಯಯನ, ಎಂ.ಎಲ್. ಸಂಪ್ರಬಂಧ, ಪು ಸಂ ೪೯

೧೬. ರಾಮಚಂದ್ರರಾವ್. ಎಸ್.ಕೆ., ಭಾರತ ದೇವಾಲಯಗಳ ನೆಲೆ, ಹಿನ್ನಲೆ, ಪು ಸಂ ೧

೧೭. ರಾಮಚಂದ್ರರಾವ್. ಎಸ್.ಕೆ., ಕೆಲವು ಧಾರ್ಮಿಕ ಕರ್ತವ್ಯಗಳು, ಪು ಸಂ ೮೦

೧೮. ಜ್ಞಾನಾಂದ.ಜಿ., ಶಿಲ್ಪದರ್ಶನ, ಸಂ.೩, ಪು ಸಂ ೧೬

೧೯. ಅದೇ, ಪು ಸಂ ೧೭

೨೦. ಬಾರಾ. ಗೋಪಾಲ್, ಕರ್ನಾಟಕದ ಕಲೆಗಳು, ಪು ಸಂ ೧೯

೨೧. ಕಡಪಟ್ಟಿ ಎಂ.ಎನ್., ಪ್ರಾ.ಕ. ಶೈವಧರ್ಮ, ಪು ಸಂ ೪೫

೨೨. ಅದೇ, ಪು ಸಂ ೩೭

೨೩. ತಿಪ್ಪೇರುದ್ರಸ್ವಾಮಿ. ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪು ಸಂ ೫೨೩

೨೪. ಕರಗುಂದ ಟಿ. ಪಂಕಜಾಕ್ಷಿ, 'ಶಿಲ್ಪ ಸೌಂದರ್ಯ', ಪು ಸಂ ೩

೨೫. ಕರಗುಂದ ಟಿ. ಪಂಕಜಾಕ್ಷಿ, ಪೂರ್ವೋಕ್ತ, ಪು ಸಂ ೩

೨೬. ದತ್ತಾತ್ರೇಯ ಜಿ ಕುಲಕರ್ಣಿ, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳೂ (ಪಿ.ಹೆಚ್.ಡಿ. ಮಹಾಪ್ರಬಂಧ) ಪು ಸಂ ೨೩೦

೨೭. ಮಹಂತೇಶ ಎನ್.ಎಸ್., 'ಹೊಸದುರ್ಗ ಪರಿಸರದ ದೇವಾಲಯಗಳು, ಪು ಸಂ ೪೯

೨೮. ಕರಗುಂದ ಟಿ., ಪೂರ್ವೋಕ್ತ, ಪು ಸಂ ೩

೨೯. ಅದೇ, ಪು ಸಂ ೬೨೬

೩೦. ಅದೇ, ಪು ಸಂ ೩೧೪

೩೧. ಸ್ವಾಮಿ ಹರ್ಷಾನಂದ, ಕರ್ನಾಟಕ ಚರಿತ್ರೆ ,ಸಂಪುಟ ೧ ೧೯೫೨ ಪು ಸಂ ೫೯

೩೨. ರಾಮಚಂದ್ರರಾವ್ ಎಸ್.ಕೆ., ಪೋರ್ವೋಕ್ತ, ಪು ಸಂ ೧೦೬

೩೩. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ ಹಿನ್ನಲೆ, ೧೯೭೫, ಪು ಸಂ ೭೦

೩೪. ಸುಂದರ ಅ., ಕರ್ನಾಟಕದ ಚರಿತ್ರೆ, ಸಂಪುಟ ೧ ೧೯೯೭ ಪು ಸಂ ೩೧೩

೩೫. ವೆಂಕೋಬರಾವ್ ಟಿ., ವಿಗ್ರಹಾರಧನೆಯೂ ವಿಗ್ರಹಗಳ ಶಿಲ್ಪಕಲಾ ಪ್ರಪಂಚ, ೧೯೫೯ ಪು ಸಂ ೪೬

೩೬. ಅದೇ, ಪು ಸಂ ೪೬

೩೭. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ ಹಿನ್ನಲೆ, ೧೯೭೫, ಪು ಸಂ ೧೩೨

೩೮. ವಾಸುದೇವನ್ ಸಿ.ಎಸ್., ವಿಜಯನಗರ ಕಾಲದ ಅಧ್ಯಯನ; ಪು ಸಂ ೧ ೧೯೦

೩೯. ಅದೇ, ಪು ಸಂ ೧೯೧

೪೦. ಅದೇ, ಪು ಸಂ ೧೯೦

೪೧. ಶ್ರೀಧರ ಮೂರ್ತಿ, ದೇವತೆ ಮತ್ತು ಹಬ್ಬಗಳು, ೧೯೮೧ ಪು ಸಂ ೧೦

೪೨. ಅದೇ, ಪು ಸಂ ೧೦-೧೧

೪೩. ರಾಮಚಂದ್ರ ಎಸ್.ಕೆ., ಪೂರ್ವೋಕ್ತ, ಪು ಸಂ ೭೬

೪೪. ಗೋಪಿನಾಥರಾವ್ ಟಿ.ವಿ., ಎಲಿಮೆಂಟ್ಸ್ ಆಫ್ ಹಿಂದೂ, ಸಂ. ೨ ೧೯೬೮ ಪು ಸಂ ೩೬

೪೫. ಅನಂತರಾಮು. ಕೆ., ಬ್ರಹ್ಮಶಿವ ಒಂದು ಅಧ್ಯಯನ, ೧೯೯೧ ಪು ಸಂ ೨೪೭

೪೬. ಪಾಡಿಗಾರ್. ಶ್ರೀನಿವಾಸ್, ಬಾದಾಮಿ ವೈಷ್ಣವ ಧರ್ಮ, ಕರ್ನಾಟಕ ಭಾರತಿ ಸಂಪುಟ
೨೧ ೧೯೮೯, ಪು ಸಂ ೧೦೭

೪೭. ರಾಮಚಂದ್ರರಾವ್ ಎಸ್. ಕೆ., ಪೂರ್ವೋಕ್ತ, ಪು ಸಂ ೧೪೬

೪೮. ಅನಂತರಾಮು. ಕೆ., ಬ್ರಹ್ಮಶಿವ ಒಂದು ಅಧ್ಯಯನ, ೧೯೬೮ ಪು ಸಂ ೧೭೬೪೯.

೪೯. ಕಲುಬುರ್ಗಿ. ಎಂ.ಎಂ., ೧೯೮೦ ಸಮಾಧಿ, ಬಲಿದಾನ ವೀರಮರಣ ಸ್ಮಾರಕಗಳು,
ಪು ಸಂ ೩-೪.

೫೦. ಅದೇ, ಪು ಸಂ ೬

೫೧. ಅದೇ, ಪು ಸಂ ೯೯-೧೦೦

೫೨. ಶೇಷಶಾಸ್ತ್ರಿ. ಆರ್., ಕರ್ನಾಟಕದ ವೀರಗಲ್ಲುಗಳು, ೧೯೮೨ ಪು ಸಂ ೧೧

೫೩. ಪಂಚಮುಖಿ, ಕರ್ನಾಟಕ ಇತಿಹಾಸ, ೧೯೬೭ ಪು ಸಂ ೭೦

೫೪. ಅದೇ, ಪು ಸಂ ೭೧

೫೫. ಶೇಷಶಾಸ್ತ್ರಿ.ಆರ್, ಪೂರ್ವೋಕ್ತ, ಪು ಸಂ ೧೪

೫೬. ಚಿದಾನಂದಮುರ್ತಿ. ಎಂ., ಪೂರ್ವೋಕ್ತ, ಪು ಸಂ ೪–೫

೫೭. ಗೋಪಾಲ್.ಆರ್., (ಸಂ) ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ೨೦೦೯ ಪು ಸಂ ೧೮೫

೫೮. ಗೋಪಾಲ್. ಬಾ.ರಾ., ಬನವಾಸಿಯ ಕದಂಬರು, ೧೯೮೩ ಶಾಸನ ಸಂಪುಟ ೨೫ ಪು ಸಂ ೫೦–೫೧

೫೯. ಕಲುಬುರ್ಗಿ. ಎಂ.ಎಂ., ಪೂರ್ವೋಕ್ತಿ, ಪು ಸಂ ೨೫೮

೬೦. ಕಲುಬುರ್ಗಿ, ಎಂ.ಎಂ., ಪೂರ್ವೋಕ್ತಿ, ಪು ಸಂ ೬

೬೧. ಮಿರ್ಜಿ ಅಣ್ಣಾರಾಯ, ಜೈನ ಧರ್ಮಗಳು, ಪು ಸಂ ೫೧೭

೬೨. ಕನವಳ್ಳಿ ಕದಾನಂದ ಮತ್ತು ಶಟ್ಟರ್., ಎಸ್. (ಅನುವಾದ) ಸಾವಿಗೆ ಆಹ್ವಾನ ೨೦೦೪, ಪು ಸಂ ೯೮

೬೩. ಕಲುಬುರ್ಗಿ.ಎಂ.ಎಂ., ಪೂರ್ವೋಕ್ತ, ಪು ಸಂ ೧೦

೬೪. ಪರಶಿವಮೂರ್ತಿ. ಡಿ.ವಿ., ಶಾಸನ ಶಿಲ್ಪಗಳು, ಪು ಸಂ ೧೧೮

೬೫. ಅದೇ, ಪು ಸಂ ೧೧೯

೬೬. ಅದೇ, ಪು ಸಂ ೧೧೮

೬೭. ಡಿ.ವಿ.ಪರಮಶಿವಮೂರ್ತಿ, ಕನ್ನಡ ಶಾಸನ ಶಿಲ್ಪ, ಪು ಸಂ ೧೧೭

೬೮. ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಸರ್ಕಾಟಕ ಸಂಸ್ಕೃತಿ ಸಮೀಕ್ಷೆ, ಪು ಸಂ ೨೯

೬೯. ತಿಪ್ಪೇರುದ್ರಸ್ವಾಮಿ.ಎಚ್., ಪೂರ್ವೋಕ್ತ, ಪು ಸಂ ೨೩೩

೭೦. ಅದೇ, ಪು ಸಂ ೨೩೫

೭೧. ಕೃಷ್ಣಕುಮಾರ್.ಸಿ.ಪಿ., ೧೯೯೩ ಶಾಸನಶಾಸ್ತ್ರ ಪ್ರವೇಶ, ಪು ಸಂ ೫೬

೭೨. ಅದೇ, ಪು ಸಂ ೫೬

೭೩. ಚಿದಾನಂದ ಮೂರ್ತಿ ಎಂ., ೧೯೭೫ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು ಸಂ ೭೫

೭೪. ಅದೇ, ಪು ಸಂ ೧೩

೭೫. ರವೀಂದ್ರ ಕೆ., ಶಾಸನಗಳ ಅಧ್ಯಯನ, ಪು ಸಂ ೩೧

೭೬. ಚಿದಾನಂದಮೂರ್ತಿ, ಪೂರ್ವೋಕ್ತ, ಪು ಸಂ ೨೭

೭೭. ಡಿ.ವಿ.ಪರಮಶಿವಮೂರ್ತಿ, ಕನ್ನಡ ಶಾಸನ ಶಿಲ್ಪಗಳು, ಪು ಸಂ ೫೪

೭೮. ಪ್ರಸನ್ನ ಕುಮಾರ್.ಡಿ., ಕರ್ನಾಟದಲ್ಲಿ ಶಿಲಾ ಶಾಸನಗಳ ನಿರ್ಮಾಣ ಮತ್ತು ಅದರ ಸಾಮಾಜಿಕ ಆಯಾಮಗಳು, (ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ) ಪು ಸಂ ೨೪

೭೯. ಎಫಿಗ್ರಫಿಯಾ ಆಫ್ ಕರ್ನಾಟಕ, ಸಂಪುಟ ೧೨

# ಅಧ್ಯಾಯ – ಐದು : ಜನಜೀವನ ವ್ಯವಸ್ಥೆ.

೫.೧ ಆಡಳಿತ ಕ್ರಮ

೫.೨ ಸಾಮಾಜಿಕ ಸ್ಥಿತಿಗತಿ

೫.೩ ಆರ್ಥಿಕ ಸ್ಥಿತಿಗತಿ

೫.೪ ಧಾರ್ಮಿಕ ಸ್ಥಿತಿಗತಿ

೫.೫ ಜಾನಪದ ವೈಶಿಷ್ಟ್ಯತೆಗಳು

# ಅಧ್ಯಾಯ – ೫
# ಜನ ಜೀವನ ವ್ಯವಸ್ಥೆ

## ೫.೧ ಆಡಳಿತ ಕ್ರಮ

### ಗ್ರಾಮ

ಗ್ರಾಮದ ವ್ಯವಹಾರವನ್ನು ಅಲ್ಲಿನ ಗ್ರಾಮಸ್ಥರೇ ನಡೆಸಿಕೊಂಡು ಹೋಗುತ್ತಿದ್ದರು. ಇದು ಆರ್ಥಿಕ ಕ್ಷೇತ್ರದಲ್ಲಿ ಸ್ವತಂತ್ರವಾಗಿತ್ತು. ಗಾವುಂಡ ಅಥವಾ ಗ್ರಾಮದ ಮುಖಂಡನು ಗ್ರಾಮಾಡಳಿತದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದನು. ಕರಣಿಕನನ್ನು ಕುಲಕರ್ಣಿ ಎಂದು ಗ್ರಾಮಸೇವಕರನ್ನು ಆಯಾಗಾರರು ಎಂದು ಕರೆಯಲಾಗುತಿತ್ತು.[೧] ಗಾವುಂಡ ಗ್ರಾಮಸಭೆಯೊಡನೆ ಗ್ರಾಮದ ಅಭ್ಯುದಯದ ಜವಾಬ್ದಾರಿ ಹೊಂದಿದ್ದನು. ಈತ ಸರ್ಕಾರ ಅಧೀನದಲ್ಲಿ ಜನರ ಪ್ರತಿನಿಧಿಯಾಗಿ ಅಭಿವೃದ್ಧಿ ಕೆಲಸ ಮಾಡುತ್ತಿದ್ದನು. ಈತನು ಸಂಭಾವನೆ, ತೆರಿಗೆಯಿಂದ ರಿಯಾಯಿತಿ ಪಡೆದಿದ್ದು ಗ್ರಾಮದ ದಂಡಾಧಿಕಾರಿಯಾಗಿ ಸಣ್ಣಪುಟ್ಟ ಅಪರಾಧಗಳ ವಿಚಾರಣೆ ನಡೆಸುತ್ತಿದ್ದನು. ಈತನು ಸಾರ್ವಜನಿಕರಿಂದ ಮತ್ತು ಸರ್ಕಾರದಿಂದ ಹಣವನ್ನು ಪಡೆದು ಲೋಕೋಪಯೋಗಿ ಕಾರ್ಯಗಳನ್ನು ಕೈಗೊಳ್ಳುತ್ತಿದ್ದನು.

ಸರ್ಕಾರದ ಅಧೀನದಲ್ಲಿ ಗ್ರಾಮಸಭೆಗಳ ಮೂಲಕ ಆಡಳಿತ ನಡೆಸಲಾಗುತ್ತಿತ್ತು. ಜಮೀನಿನ ಮೇಲಿನ ಹತೋಟಿ ಮತ್ತು ನೀರಾವರಿ ಕೆಲಸಗಳು, ದೇವಸ್ಥಾನಗಳ ಮೇಲ್ವಿಚಾರಣೆ, ತೆರಿಗೆಗಳ ವಸೂಲಿ, ದಾನಗಳ ಹತೋಟಿ, ಹಣದ ಲೇವಣಿಗಳನ್ನು ಹೊಂದಿದ್ದು ಧರ್ಮದರ್ಶಿಯಾಗಿ, ಕೆರೆ, ದೇವಸ್ಥಾನಗಳ ಲೋಕೋಪಯೋಗಿ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದವು.[೨]

### ಅಗ್ರಹಾರಗಳು

ಬ್ರಾಹ್ಮಣರ ಜೀವನೋಪಾಯಕ್ಕೆ ಕೊಟ್ಟ ಗ್ರಾಮವೇ ಅಗ್ರಹಾರ. ಬ್ರಾಹ್ಮಣ ಪಾಲುಗಾರರನ್ನು "ಮಹಾಜನರೆಂದು" ಕರೆಯುತ್ತಿದ್ದರು. "ಮಹಾಜನಸಭೆ", ಅಗ್ರಹಾರದ ವಿಷಯಗಳ ಮೇಲ್ವಿಚಾರಣೆ ಹೊಂದಿತ್ತು. ಇವರು ಪೌರಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು.[೩] ಇವು ವಿದ್ಯಾ ಕೇಂದ್ರಗಳಾಗಿದ್ದವು. ಅಲ್ಲದೇ ಸ್ವಯಂ ಅಧಿಕಾರವುಳ್ಳ ಸಂಸ್ಥೆಯಾಗಿದ್ದವು. ಅಗ್ರಹಾರದ ಆಡಳಿತ ನೋಡಿಕೊಳ್ಳಲು ಸರ್ಕಾರ ಅಧಿಕಾರಿಗಳನ್ನು ನೇಮಿಸುತ್ತಿದ್ದಿತು. ಅಗ್ರಹಾರಗಳು ಸ್ವಾಯತ್ತತೆಯ ಹಕ್ಕುಗಳನ್ನು ಹೊಂದಿದ್ದ ಸಂಸ್ಥೆಗಳಾಗಿದ್ದವು. ಕೋರಾ ಹೋಬಳಿ ಪರಿಸರದಲ್ಲಿ ಅಹೋಬಲ, ಅಗ್ರಹಾರ, ದಾನಶಾಸ್ತ್ರೀಪಾಳ್ಯ, ಅಮಾನಿಕೆರೆ ಮೊದಲಾದ ಅಗ್ರಾಹಾರಗಳನ್ನು ಕಾಣಬಹುದು.

### ಮಹಾಜನಸಭಾ

ಅಗ್ರಹಾರ ಮತ್ತು ಗ್ರಾಮಗಳ ಆಡಳಿತವು ಮಹಾಜನರನ್ನೊಳಗೊಂಡ ಸಭೆಗೆ ಸೇರಿದ್ದಿತು. ಈ ಸಭೆಗಳು ಮಂಟಪಗಳಲ್ಲಿ ಸೇರುತ್ತಿದ್ದವು. ಮಹಾಜನರ ತೀರ್ಮಾನಗಳನ್ನು ಒಮ್ಮತದಿಂದ ತೆಗೆದುಕೊಳ್ಳಲಾಗುತ್ತಿತೆಂಬುದಕ್ಕೆ "ಸರ್ವೈಕ್ಯಮತ್ಯರಾಗಿ" ಐಕ್ಯಸ್ವಾಮ್ಯವಾಗಿ 'ಒಡಂಬಟ್ಟು' ಎಂಬು ಪದಗಳನ್ನು ಉಪಯೋಗಿಸುತ್ತವೆ.[೪] ಮಹಾಜನಸಭೆಯು ಅಗ್ರಹಾರದ ಮತೀಯ ಆಡಳಿತ, ಸಾರ್ವಜನಿಕ, ಆರ್ಥಿಕ, ಸಾಮಾಜಿಕ ಮತ್ತು ನ್ಯಾಯ ವಿತರಣೆಗೆ ಸಂಬಂಧಪಟ್ಟ ಅನೇಕ ಕರ್ತವ್ಯಗಳನ್ನು ಮಾಡುತ್ತಿದ್ದವು. ಛತ್ರ ಮತ್ತು ಮಠಗಳನ್ನು ನಡೆಸಿಕೊಂಡು ಹೋಗಲು ಸಾರ್ವಜನಿಕ ದತ್ತಿಗಳನ್ನು ಇವರು ಸಂರಕ್ಷಣೆ ಮಾಡುತ್ತಿದ್ದರು. ಅಗ್ರಹಾರದಲ್ಲಿ ಗಡಿ ವಿವಾದಗಳನ್ನು ಹಾಗೂ ಅಗ್ರಹಾರಗಳ ನಡುವೆ ನಡೆದ ವಿವಾದಗಳನ್ನೂ ತೀರ್ಮಾನಿಸುವುದು ಇವರ ಮುಖ್ಯ ಕರ್ತವ್ಯವಾಗಿತ್ತು.

## ೫.೨ ಸಾಮಾಜಿಕ ವ್ಯವಸ್ಥೆ

ಪರಸ್ಪರ ಸಹಕಾರ ಮನೋಭಾವದಿಂದ ಕಷ್ಟ ಸುಖಗಳಲ್ಲಿ ಪರಸ್ಪರ ಭಾಗಿಯಾಗುವ ಒಂದು ವ್ಯವಸ್ಥಿತ ಜನಸಮೂಹವನ್ನು ಸಮಾಜ ಎನ್ನಬಹುದು.[೫] ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ವರ್ಣ ವ್ಯವಸ್ಥೆ, ಜಾತಿ ಪದ್ಧತಿಗಳು ಆಚಾರ ವಿಚಾರಗಳು, ನಂಬಿಕೆ ಆಚರಣೆಗಳು ಮಹತ್ತರವಾದ ಪಾತ್ರವನ್ನು ವಹಿಸುತ್ತವೆ. ಈ ಎಲ್ಲ ರೂಢಿ ಸಂಪ್ರದಾಯಗಳು ತಲೆಮಾರಿನಿಂದ ತಲೆಮಾರಿಗೆ ಬಳುವಳಿಯಾಗಿ ಮುಂದುವರೆದುಕೊಂಡು ಬರುತ್ತವೆ. ಇವು ಆ ಸಮಾಜದ ನೈತಿಕ ನೆಲೆಗಟ್ಟಿನಲ್ಲಿ ಪ್ರತಿಬಿಂಬಿತವಾಗಿರುತ್ತವೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖವಾಗಿ ವರ್ಣವ್ಯವಸ್ಥೆ ಮತ್ತು ಜಾತಿ ವ್ಯವಸ್ಥೆಯನ್ನು ಕಾಣಬಹುದು.

### ಬ್ರಾಹ್ಮಣರು

ವೇದಗಳ ಕಾಲದಿಂದಲೂ ಬ್ರಾಹ್ಮಣರು ಸಮಾಜದಲ್ಲಿ ಉಚ್ಚ ಸ್ಥಾನವನ್ನು ಪಡೆದುಕೊಂಡಿದ್ದರು ಮತ್ತು ಉತ್ತಮ ಉನ್ನತ ಗೌರವಾದರಗಳಿಗೆ ಪಾತ್ರರಾಗಿದ್ದರು. ಇವರು ಬ್ರಹ್ಮನನಾಲಗೆಯಿಂದ ಹುಟ್ಟಿದವರೆಂದು ನಂಬಲಾಗಿದೆ. ವೇದಾಧ್ಯಯನ, ಧರ್ಮಬೋಧನೆ, ಪೂಜೆ ಪುನಸ್ಕಾರ, ದೇವಸ್ಥಾನದ ಉಸ್ತುವಾರಿ, ಧರ್ಮಾಧಿಕಾರಿ ಮುಂತಾದ ಉನ್ನತವಾದ ಕಾರ್ಯಗಳೆಲ್ಲಾ ಬ್ರಾಹ್ಮಣರಿಗೆ ಸೇರಿದವುಗಳಾಗಿದ್ದವು. ಅವರು ತಮ್ಮ ವೈವಿಧ್ಯತೆಯ ಸೃಜನಶೀಲತೆಯಿಂದ ಗೌರವಾನ್ವಿತ ಪಾಂಡಿತ್ಯದಿಂದ "ದ್ವಿಜ"ರೆಂಬ ಗೌರವಾದರಕ್ಕೆ ಪಾತ್ರರಾಗಿದ್ದಾರೆ. 'ದ್ವಿಜ' ಎಂದರೆ ಶ್ರೇಷ್ಠ, ಉನ್ನತ ಎಂಬರ್ಥಗಳಿವೆ.[೬] ಇವರು ಹಲವಾರು ಗೋತ್ರಕ್ಕೆ ಸಂಬಂಧಿಸಿದವರಾಗಿರುತ್ತಾರೆ. ಅವರಲ್ಲಿ ಭಾರದ್ವಾಜ ಗೋತ್ರ ಜಮದಗ್ನಿ ಗೋತ್ರ, ಕೌಂಡಿನ್ಯ ಗೋತ್ರ, ಶ್ರೀ ವತ್ಸ ಗೋತ್ರ, ಗೌತಮ ಗೋತ್ರ, ಕೌಶಿಕ ಗೋತ್ರ, ಅಗಸ್ತ್ಯ ಗೋತ್ರ, ಸಂಕ್ಕಾಯನ ಗೋತ್ರ, ವಶಿಷ್ಟ ಗೋತ್ರ, ಹರಿತಸ ಗೋತ್ರ ಮುಂತಾದ ಗೋತ್ರಗಳಿಗೆ ಸಂಬಂಧಿಸಿದ ಬ್ರಾಹ್ಮಣರು ಕಂಡು ಬರುತ್ತಾರೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬ್ರಾಹ್ಮಣರು ಪ್ರಮುಖ ಪಾತ್ರ ವಹಿಸಿದ್ದಾರೆ. ಇವರಿಗೆ ಅಹೋಬಲ ಅಗ್ರಹಾರವನ್ನು ದಾನವಾಗಿ ಕೊಟ್ಟಿರುವಂತೆ ತಾಮ್ರದಾನ ಶಾಸನದಿಂದ ತಿಳಿದುಬಂದಿದೆ. ಇದರ ಪ್ರಕಾರ ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ ಹರಿಹರರಾಯನ ಪುತ್ರ ಬುಕ್ಕರಾಯ ಎಂಬುವವನು ಶಾಲಿವಾಹನ ಶಕ ೧೯೫೨ನೇ ಸಾಧಾರಣ ನಾಮ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರದ ಅರುಣೋದಯ ಪುಣ್ಯಕಾಲದಲ್ಲಿ ಅಹೋಬಲಾರ್ಯನ ಪುತ್ರನಾದ ಕೃಷ್ಣಯಜ್ವಾ ಎಂಬುವರ ಪುತ್ರರಾದ ಸುಬ್ಬಾದೀಕ್ಷಿತರೆಂಬುವವರಿಗೆ ಘನಶೈಲ ಪ್ರಾಂತ್ಯದ ಕೋರಾ ರಾಷ್ಟ್ರಕ್ಕೆ ಸಂಬಂಧಪಟ್ಟ "ಆನೆ ಬಿದ್ದ ದರಿ" ಎಂಬ ಸ್ಥಳದಲ್ಲಿನ ಘಟ್ಟದ ಹಳ್ಳಿ ಎಂಬ ಗ್ರಾಮವನ್ನು "ಬುಕ್ಕರಾಯಪುರ" ಎಂಬ ಹೆಸರಿನಿಂದ ದಾನ ನೀಡಿರುವುದಾಗಿ ತಿಳಿದು ಬರುತ್ತದೆ.

**ಕ್ಷತ್ರಿಯರು**

ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣರ ನಂತರದ ಸ್ಥಾನವನ್ನು ಕ್ಷತ್ರಿಯರು ಪಡೆದಿದ್ದಾರೆ. ಇವರು ಬ್ರಹ್ಮನ ಭುಜಗಳಿಂದ ಜನಿಸಿದರೆಂದು ತಿಳಿಯಲಾಗಿದೆ. ಇವರು ಶೌರ್ಯ ಮತ್ತು ಪರಾಕ್ರಮಗಳಿಗೆ ಹೆಸರುವಾಸಿಯಾಗಿದ್ದು, ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಮಾಜವನ್ನು ರಕ್ಷಿಸುವುದಾಗಿರುತ್ತದೆ. ಇವರು ಸಾರ್ವಜನಿಕರನ್ನು ಅವರ ಶತ್ರುಗಳಿಂದ ರಕ್ಷಿಸುವುದು ಹಾಗೂ ತಮ್ಮ ಎಲ್ಲೆಯನ್ನು ವಿಸ್ತರಿಸಿಕೊಳ್ಳುವುದು, ರಾಜ್ಯದ ರಕ್ಷಣೆಯ ಆಡಳಿತದಲ್ಲಿ ಇವರ ಪಾತ್ರ ಅಮೋಘವಾದುದಾಗಿದೆ. ಈ ಪರಿಸರದ ಸಮುದಾಯ ಜನರು ಅಗ್ನಿವಂಶ ಕ್ಷತ್ರಿಯ ಕುಲಕ್ಕೆ ಸೇರಿದವರಾಗಿದ್ದರೂ ವ್ಯವಸಾಯದಲ್ಲಿ ಹೆಚ್ಚಿನದಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**ವೈಶ್ಯರು**

ವರ್ಣ ಸಮಾಜದ ವ್ಯವಸ್ಥೆಯಲ್ಲಿ ತೃತೀಯ ಸ್ಥಾನವನ್ನು ಪಡೆದವರಾಗಿದ್ದರು. ಇವರು ಬ್ರಹ್ಮನ ತೊಡೆಯಿಂದ ಹುಟ್ಟಿದವರು ಎನ್ನಲಾಗಿದೆ. ಇವರ ಪ್ರಮುಖ ವೃತ್ತಿ ವ್ಯಾಪಾರವಾಗಿರುತ್ತದೆ. ಇವರನ್ನು ಪ್ರಸ್ತುತ ಪ್ರದೇಶದಲ್ಲಿ ಶೆಟ್ಟರು ಎಂದು ಕರೆಯುತ್ತಾರೆ. ಇವರು ಬುದ್ಧಿವಂತಿಕೆಗೆ ಹೆಸರುವಾಸಿಯಾಗಿದ್ದು, ವೈಜ್ಞಾನಿಕತೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ. ಆಡಳಿತದಲ್ಲಿ ಗೌಡ, ವಟೇಲ, ಶಾನುಭೋಗ ಎಂಬ ಹೆಸರಿನಲ್ಲಿ ಸೇವೆ ಸಲ್ಲಿಸುತ್ತಿದ್ದರು ಎಂಬುದರ ಬಗ್ಗೆ ಕೆಲವೊಂದು ನಿದರ್ಶನಗಳಿವೆ.

**ಶೂದ್ರರು**

ಸಾಮಾಜಿಕ ವ್ಯವಸ್ಥೆಯ ಕೆಳಹಂತದಲ್ಲಿದ್ದು, ಮೇಲಿನ ಮೂರು ವರ್ಗಗಳಿಗೆ ಸೇವೆ ಮಾಡಿಕೊಂಡು ಬಂದಿದ್ದವರಾಗಿದ್ದಾರೆ. ಇವರು ಬ್ರಹ್ಮನ ಪಾದಗಳಿಂದ ಉದಯಿಸಿದವರು ಎಂದು ನಂಬಲಾಗಿದೆ. ಸಮಾಜದಲ್ಲಿನ ಕೆಳಹಂತದ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಉದಾ: ಚಪ್ಪಲಿ ಹೊಲೆಯುವುದು,

ಸತ್ತ ಪ್ರಾಣಿಗಳನ್ನು ಸಾಗಿಸುವುದು, ಮೇಲಿನ ಮೂರು ವರ್ಗಗಳಿಗೆ ಸಹಾಯಕ ಕೆಲಸಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಆದರೆ ಈಗ ಈ ಪರಿಸ್ಥಿತಿಯು ಬದಲಾಗಿದೆ. ಇತರೆ ಜನಾಂಗಗಳಾದ ಅಗಸ, ಒಕ್ಕಲಿಗ, ಕುರುಬ, ಗೊಲ್ಲ, ಈಡಿಗ, ಸಂದಾರ ಲಿಂಗಾಯಿತ, ನಾಯಕರು, ಉಪ್ಪಾರ, ತಿಗಳ, ಭೋವಿ, ಮುತಾಂದ ಜನಾಂಗದವರು ಈ ಪ್ರದೇಶದಲ್ಲಿ ಕಂಡು ಬರುತ್ತಾರೆ. ಆದರೂ ಇವರಲ್ಲಿ ಡೊಂಬ, ನಾವಿದ, ಹಾವಾಡಿಗರು ಮೊದಲಾದವರು ತಮ್ಮ ಹಕ್ಕು ಬಾಧ್ಯತೆಗಳನ್ನು ಕಾಪಾಡಿಕೊಂಡಿದ್ದರು. ಇವರಿಗೆಲ್ಲ ವಿಜಯನಗರ ಅರಸರಿಂದ ಪ್ರೋತ್ಸಾಹ ದೊರಕುತ್ತಿತ್ತು. ಉದಾ: ಡೊಂಬರ ಬದುಕನ್ನೂ ಚಿತ್ರಿಸುವ ಕೆಲವು ಉಬ್ಬುಶಿಲ್ಪಗಳು ಮಹಾನವಮಿ ದಿಬ್ಬದ ಸ್ಮಾರಕದಲ್ಲಿ ಕಾಣಬಹುದು.

ಹೀಗೆ ವರ್ಣವ್ಯವಸ್ಥೆ ಎಂಬ ಶಬ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಕುರಿತ ಅನೇಕ ಸಾಹಿತ್ಯಿಕ ಕೃತಿಗಳೂ ಇವರ ಲಕ್ಷಣಗಳನ್ನು ನಿರೂಪಿಸುತ್ತವೆ. ವೇದಾಧ್ಯಯನ ವಿಪ್ರರಿಗೂ, ಧರಣಿ ಪಾಲಿನ ಕ್ಷತ್ರಿಯರಿಗೂ ವ್ಯಾಪಾರ ವ್ಯವಹಾರ ವೈಶ್ಯರಿಗೂ ಕೃಷಿ ಮುಂತಾದ ಸೇವಾವೃತ್ತಿಗಳು ಶೂದ್ರರಿಗೆ ಮೀಸಲಾದವು.[೭] ಈ ನಾಲ್ಕು ವರ್ಣಗಳ ಮೂಲ ಏನೇ ಇದ್ದರೂ ಇವು ಅಂದಿನ ಸಮಾಜದಲ್ಲಿದ್ದ ಅಸಮಾನತೆಯನ್ನು ಪ್ರತಿನಿಧಿಸುತ್ತವೆ. ಶಿವಶರಣು, ದಾಸಕೂಟದವರು, ತಮ್ಮ ವಚನ ಮತ್ತು ಕೀರ್ತನೆಗಳ ಮೂಲಕ ಈ ವ್ಯವಸ್ಥೆಗೆ ಹೊಸ ತಿರುವನ್ನು ನೀಡಿದರು.[೮]

### ಸ್ತ್ರೀಯರ ಸ್ಥಾನಮಾನ

ಹಿಂದೂ ಸಮಾಜದ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರ ಸ್ಥಾನಮಾನ ವೈವಿಧ್ಯತೆಯಿಂದ ಕೂಡಿದೆ. ವೇದಗಳ ಕಾಲದಲ್ಲಿ ಸ್ತ್ರೀಯು ಪೂಜ್ಯನೀಯ ಸ್ಥಾನವನ್ನು ಪಡೆದಿದ್ದಳು. ನಂತರದ ಕಾಲದಲ್ಲಿ ಅವರ ಸ್ಥಾನಮಾನ ಕುಂಠಿತಗೊಂಡಿತು. ಅದರಲ್ಲೂ ಹೆಚ್ಚಾಗಿ ಕರ್ನಾಟಕದ ಸ್ತ್ರೀಗೆ ಗೌರವ ಸ್ಥಾನವಿದ್ದರೂ "ಅರ್ಥೋಹಿ ಕನ್ಯಾ ಪರಕೀಯ ಏವಾ" ಹೆಣ್ಣು ಮನೆಬಿಟ್ಟು ಹೋಗುವವಳು ಅಥವಾ ಪರಕೀಯ ಎಂಬ ವಾಡಿಕೆಯೂ ಇತ್ತು.[೯] ಧಾರ್ಮಿಕ, ಆರ್ಥಿಕ, ಕಲೆ, ಸಾಹಿತ್ಯ ವಿಜ್ಞಾನ, ರಾಜಕೀಯ, ಶಿಕ್ಷಣ ಕ್ಷೇತ್ರಗಳಲ್ಲಿ ಮುಂತಾದ ವಿವಿಧ ಮಹಿಳೆಯರು ವಹಿಸುತ್ತಿರುವ ಪಾತ್ರ ಗಳಿಸಿರುವ ಸಾಧನೆ ಅತೀ ಮಹತ್ವದ್ದು.[೧೦] ಸಾಮಾಜಿಕ ರಂಗದಲ್ಲಿ ಸ್ತ್ರೀಯಾದವಳು ತಾಯಿ, ಪತ್ನಿ, ಸಹೋದರಿ, ಮಗಳು ಮುಂತಾದ ಪಾತ್ರ ನಿರ್ವಹಿಸುತ್ತಿದ್ದಳು. ಇದಕ್ಕೆ ಶಾಸನಗಳೂ ಪೂರಕ ಮಾಹಿತಿಯನ್ನು ಒದಗಿಸುತ್ತಿದ್ದವು. ಮಹಿಳೆಯರು ಪರಿಸರ ಮತ್ತು ಎಲ್ಲಾ ಸಾಮಾಜಿಕ, ಧಾರ್ಮಿಕ ಕಾರ್ಯಗಳಲ್ಲಿ ಇವಳ ಪಾತ್ರ ಪ್ರಮುಖವಾಗಿತ್ತು. ದೇವಾಲಯಗಳ ಪರಿಚಾರಕ ಕಾರ್ಯಗಳಲ್ಲಿ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದರು. ಪುರಾತತ್ವೀಯ ಆಕರಗಳು ಅಂದಿನ ಸ್ತ್ರೀಯರಿಗೆ ಗೌರವವಿತ್ತೆಂಬುದನ್ನು ದೃಢಪಡಿಸುತ್ತವೆ.[೧೧] ಬ್ರಾಹ್ಮಣರಿಗೆ ದಾನ ಮಾಡುವುದು, ಕೆರೆಕಟ್ಟೆ, ಅಗ್ರಹಾರ, ಛತ್ರ, ನಿರ್ಮಾಣ ಮಾಡುವುದು ಮೊದಲಾದ ಜನೋಪಕಾರ್ಯಗಳಲ್ಲೂ ಮಹಿಳೆ ಸಕ್ರಿಯವಾಗಿ ಭಾಗವಹಿಸುತ್ತಿದ್ದಳು. ಈ ರೀತಿ ಮಹಿಳೆಯರ ಸ್ಥಾನಮಾನದಲ್ಲಿ ಕಂಟಕಪ್ರಾಯವಾದ ವೇಶ್ಯಾವೃತ್ತಿ, ದೇವದಾಸಿ

ವ್ಯವಸ್ಥೆ ಮತ್ತು ಸತಿ ಸಹಗಮನ, ಬಾಲ್ಯವಿವಾಹ ಮೊದಲಾದ ಅನಿಷ್ಟ ಪದ್ಧತಿಗಳು ಈ ಸಮಾಜದಲ್ಲಿ ಬಲಿಷ್ಠವಾಗಿದ್ದವು ಎಂಬುದು ಗಮನಿಸಬೇಕಾದ ಅಂಶ.[೧೨]

## ೫.೩ ಆರ್ಥಿಕ ಸ್ಥಿತಿಗತಿ

**ಭೂಮಿ:** ಒಂದು ಪ್ರದೇಶದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಆ ಪರಿಸರದ ನೈಸರ್ಗಿಕ ಸಂಪತ್ತು ಮೂಲಭೂತ ಸೌಕರ್ಯಗಳು ಮತ್ತು ಜನರ ದುಡಿಮೆ ಅವಲಂಬಿತವಾಗಿರುತ್ತದೆ. ಈ ವ್ಯವಸ್ಥೆಗೆ ಅನುಗುಣವಾಗಿ ಪ್ರದೇಶದ ಜನ-ಜೀವನ, ಪದ್ಧತಿ, ನಿರ್ಧಾರವಾಗುತ್ತದೆ. ಈ ದಿಸೆಯಲ್ಲಿ ಕೋರಾ ಪರಿಸರವು ತುಮಕೂರು ಜಿಲ್ಲೆಯಲ್ಲಿ ವಿಲೀನಗೊಂಡು ಅಂದಿನಿಂದ ಇಂದಿನವರೆಗೂ ವ್ಯವಸಾಯದ ಚಟುವಟಿಕೆಗಳು ಮತ್ತು ಗೃಹ ಕೈಗಾರಿಕೆಗಳ ಕೇಂದ್ರವಾಗಿದೆ. ಈ ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಪ್ರಮುಖ ಆಕರಗಳಲ್ಲಿ ಶಾಸನಗಳು ಬಹುಮುಖ್ಯ ಪಾತ್ರ ವಹಿಸಿವೆ. ಸಮಕಾಲೀನ ಆರ್ಥಿಕ ಸಾಮಾಜಿಕ, ಧಾರ್ಮಿಕ ಕ್ಷೇತ್ರದಲ್ಲಿ ಭೂಮಿ ಪ್ರಮುಖ ಸ್ಥಾನ ಪಡೆದಿದೆ. ಇಲ್ಲಿನ ಭೂಮಿಯು ಕಪ್ಪು, ಕೆಂಪು, ಮರಳು ಮಿಶ್ರಿತ ಮಣ್ಣುಗಳಿಂದ ಆವೃತವಾಗಿದೆ. ವ್ಯವಸಾಯವೇ ಜನರ ಪ್ರಮುಖ ಉದ್ಯೋಗವಾಗಿದೆ. ಈ ಪ್ರದೇಶದಲ್ಲಿ ಒಣ ಬೇಸಾಯ, ನೀರಾವರಿ ಬೇಸಾಯ, ಭೂಮಿಗಳೆರಡೂ ಕಂಡುಬರುತ್ತವೆ.[೧೩]

### ನೀರಾವರಿ

ಪ್ರಾಚೀನ ಕಾಲದಿಂದಲೂ ಇಲ್ಲಿನ ನೀರಾವರಿ ವ್ಯವಸ್ಥೆ ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿತ್ತು. ಅರಸರಾಧಿಗಳು ಕೆರೆ, ಬಾವಿ, ಕಾಲುವೆಗಳನ್ನು ನಿರ್ಮಿಸುವುದು ಶ್ರೇಯಸ್ಕರವೆಂದು ಭಾವಿಸಿದ್ದರು. ಬಾವಿ, ಕೆರೆ, ಕಾಲುವೆಗಳಿಂದ ಭೂಮಿಗೆ ನೀರನ್ನು ಸಾಗಿಸುವ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು. ಕೋರಾ ಪರಿಸರದ ಆಳ್ವಿಕೆ ಮಾಡಿದ ರಾಜರು, ಊರಿನ ಗೌಡರು, ಪಾಳೆಗಾರರು, ಕೆರೆ, ಬಾವಿಗಳನ್ನು ಕಟ್ಟಿಸಿದ್ದಾರೆ.[೧೪] ಪ್ರಸ್ತುತ ಪರಿಸರದ ಸುತ್ತ ಮುತ್ತ ಸುಮಾರು ೧೫ಕ್ಕೂ ಹೆಚ್ಚು ಕೆರೆಗಳು ಕಂಡು ಬಂದಿವೆ. ಕೆಲವು ಶಾಸನಗಳಲ್ಲಿ ಕೆರೆಗಳನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ೧.ನದಿ ಆಶ್ರಿತ ಕೆರೆಗಳು, ೨. ಮಳೆ ಆಶ್ರಿತ ಕೆರೆಗಳು. ಕೆರೆ ಎಂದೊಡನೆ ಮೊದಲಿಗೆ ನೆನಪಾಗುವುದು ಲಕ್ಷ್ಮೀಧರಾಮಾತ್ಯನ ಶಾಸನ “ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರವಂ ಮೂಡಿಸು”[೧೫] ಎಂಬ ವಿಜಯನಗರದ ಪ್ರೌಢಪ್ರತಾಪರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಲುಣಿಸುವ ಸಂದರ್ಭದಲ್ಲಿ ಸಮಾಜ ಕಾರ್ಯದ ಜ್ಞಾನಾಂಶವನ್ನು ಬಿತ್ತಿ ಉತ್ತುತ್ತಿರುವುದನ್ನು ಈ ಶಾಸನದಿಂದ ಅರಿಯಬಹುದು. ಪ್ರಸ್ತುತ ಪರಿಸರದಲ್ಲಿ ದಾನಶಾಸ್ತ್ರಿ ಪಾಳ್ಯದ ಕೆರೆ, ಮುದ್ದರಾಮಯ್ಯನ ಪಾಳ್ಯದ ಕೆರೆ, ಸಿ.ಟಿ. ಕೆರೆ, ಅಮಾನಿ ಕೆರೆ, ಕೆಂಪನ ದೊಡ್ಡೇರಿ ಕೆರೆ, ಮುಂತಾದವುಗಳು ಈ ಭಾಗದ ಜನತೆಗೆ ನೀರಿನ ಸೌಕರ್ಯಗಳಿಗೆ ಸಹಕಾರಿಯಾಗಿವೆ. ಹಿಂದಿನ ಕಾಲದಲ್ಲಿ ಉದಾತ್ತ ಗುಣಗಳ ಅರಸರು ಉದಕ ದಾನದ ಮಹತ್ವವನ್ನು ತಿಳಿದು ಬಾವಿಗಳನ್ನು ತೋಡಿಸಿ, ಉದಾರವಾಗಿ ದಾನ ದತ್ತಿಗಳನ್ನು ಮಾಡಿದ ವಿಚಾರಗಳನ್ನು ಸಮಕಾಲೀನ ಶಾಸನಗಳು ಉಲ್ಲೇಖಿಸಿವೆ.

ಇದರಿಂದ ಬಾವಿ ತೋಡಿಸುವುದು, ಒಂದು ಪುಣ್ಯದ ಕಾರ್ಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ಪ್ರಾಚೀನ ಕಾಲದಿಂದಲೂ ನೀರಿನ ಅವಶ್ಯಕತೆಗಾಗಿ ಬಾವಿ, ಕೆರೆ, ಕುಂಟೆಗಳನ್ನು ಆಶ್ರಯಿಸಿಕೊಂಡು ಬರುತ್ತಿರುವುದು ಸರ್ವೇಸಾಮಾನ್ಯವಾಗಿದೆ.

**ಬೆಳೆಗಳು**

ಭೂಮಿಯಲ್ಲಿ ನೀರು ನಿಲ್ಲುವಂತೆ ಕಟ್ಟೆಯನ್ನು ನಿರ್ಮಿಸಿ, ಅದನ್ನು ಗದ್ದೆಯಾಗಿ ಪರಿವರ್ತಿಸಿ ಅದರಲ್ಲಿ ಪ್ರಮುಖ ನೀರಾವರಿ ಬೆಳೆಗಳಾದ ಭತ್ತ, ಬಾಳೆ, ತೆಂಗು, ಅಡಿಕೆಗಳನ್ನು ಬೆಳೆಯಲಾಗುತ್ತಿತ್ತು. ವಿವಿಧ ಬಗೆಯ ಪುಷ್ಪದ ಬೆಳೆಗಾರಿಕೆ ಮತ್ತು ಪಶುಸಂಪತ್ತು, ಸಮೃದ್ಧವಾಗಿತ್ತು. ವಾಣಿಜ್ಯ ಬೆಳೆಗಳಾಗಿ ತೆಂಗು, ಬಾಳೆ, ಅಡಿಕೆಯನ್ನು ಬೆಳೆಯಲಾಗುತ್ತಿತ್ತು. ಒಣಬೇಸಾಯ ಭೂಮಿಗಳಲ್ಲಿ ರಾಗಿ, ಜೋಳ ಸಜ್ಜೆ, ನೆಲಗಡಲೆ, ಮೆಕ್ಕೆಜೋಳ ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಎಂಬುದನ್ನು ತಿಳಿಯಲಾಗಿದೆ.

**ತೆರಿಗೆ ಪದ್ಧತಿ**

ಕಂದಾಯ, ಕೊಟು, ಕರ, ಮಾನ್ಯ ತೆರಿಗೆ ಮುಂತಾದ ಪದಗಳು ತೆರಿಗೆಗಳ ಮಾಹಿತಿಯನ್ನು ತಿಳಿಸುತ್ತವೆ. ವಿವಿಧ ಮೂಲಗಳಿಂದ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಅಂಗಡಿ ಕೆರೆ, ಭೂಮಿ, ಗೋಮಾಳ, ಮನೆ ಮುಂತಾದವುಗಳ ಮೇಲೆ ತೆರಿಗೆಯನ್ನು ಹಾಕಲಾಗುತ್ತಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಚಿನಿವಾರದಹಳ್ಳಿಯಲ್ಲಿ ಕಂದಾಯವನ್ನು ಚಿನ್ನದ ರೂಪದಲ್ಲಿ ಕೊಡಲಾಗುತ್ತಿತು ಎಂಬುದು ಬೆಳಕಿಗೆ ಬಂದಿದೆ.

**ಸಾರಿಗೆ ವ್ಯವಸ್ಥೆ**

ಪ್ರಸ್ತುತ ಪರಿಸರದ ಸಾರಿಗೆ ವ್ಯವಸ್ಥೆಯು ಹೆಚ್ಚಿನದಾಗಿ ಎತ್ತಿನ ಗಾಡಿಯ ಮೂಲಕವೇ ನಡೆದಿತ್ತು. ಇದು ಸಂಪರ್ಕ ವ್ಯವಸ್ಥೆಯಾಗಿತ್ತು. ಕುದುರೆ, ಎತ್ತು, ಕತ್ತೆ, ಎಮ್ಮೆ ಸರಕನ್ನು ಸಾಗಿಸುವ ಸಾಧನಗಳಾಗಿದ್ದವು. ಇತ್ತೀಚಿಗೆ ಟ್ರಾಕ್ಟರ್, ಆಟೋ, ಬಸ್‌ಗಳ ಮೂಲಕ ಸರುಕು ಮತ್ತು ಪ್ರಯಾಣಿಕೆರನ್ನು ಸಾಗಿಸಲಾಗುತ್ತದೆ.

**ನಾಣ್ಯ ಪದ್ಧತಿ**

ಮೊದ ಮೊದಲು ವಸ್ತು ವಿನಿಯಮ ಪದ್ಧತಿ ಜಾರಿಯಲ್ಲಿದ್ದರೂ ನಂತರದಲ್ಲಿ ನಾಣ್ಯ ಪದ್ಧತಿಯೂ ಜಾರಿಗೆ ಬಂದಿತು. ಈ ಪ್ರದೇಶದ ಆರ್ಥಿಕ ಪ್ರಗತಿ ಅವರ ನಾಣ್ಯಗಳಲ್ಲಿ ಬಿಂಬಿತವಾಗಿರುವುದು ಸುಲಭವಾಗಿ ಗುರುತಿಸಬಹುದು ವಿಷಯ, ಕಾಸು, ಪೈಸೆ, ಆಣೆ, ರೂಪಾಯಿಗಳು ಇಲ್ಲಿನ ವ್ಯಾಪಾರದ ವಹಿವಾಟಿನ ನಾಣ್ಯಗಳಾಗಿದ್ದವು. ಒಟ್ಟಾರೆ ಕೋರಾ ಪರಿಸರದಲ್ಲಿ ಲಭ್ಯವಾದ ನಾಣ್ಯಗಳು ಆ ಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುತ್ತವೆ.

## ೫.೪ ಧಾರ್ಮಿಕ ಸ್ಥಿತಿಗತಿ

ಧಾರ್ಮಿಕ ವ್ಯವಸ್ಥೆಯು ಪ್ರಸ್ತುತ ಪರಿಸರದ ಜನಜೀವನದ ಅವಿಭಾಜ್ಯ ಅಂಗವಾಗಿದೆ. ಧರ್ಮ ಎಂದರೆ ದೈವಗಳು ಹಾಗೂ ಭಕ್ತರು. 'ಧರ್ಮ' ಎಂಬ ಪದವು 'ಧೃ' ಎಂಬ ಧಾತುವಿಗೆ 'ರ್ಮ' ಎಂಬ ಪ್ರತ್ಯಯನ್ನು ಸೇರಿಸುವುದರಿಂದ ಉತ್ಪತ್ತಿಗೊಂಡಿದೆ. ಧರ್ಮದ ಅರ್ಥವನ್ನು ಹುಡುಕಿದರೆ ಜಾತಿ–ಪಂಗಡಗಳಿಗೆ ಸೇರಿದ, ಆಚಾರ–ವಿಚಾರ, ಭಕ್ತಿ ಔಚಿತ್ಯವೆಂದರ್ಥವಾಗುತ್ತದೆ.[೧೬] ಆಂಗ್ಲಭಾಷೆಯಲ್ಲಿ ರಿಲಿಜನ್ ಎಂಬ ಪದಕ್ಕೆ ಇಂಗ್ಲೀಷ್–ಕನ್ನಡ ನಿಘಂಟಿನಲ್ಲಿ 'ಮಾನವನು ತಾನು ಒಂದು ಅತಿಮಾನುಷ ಶಕ್ತಿಯ ಅಧೀನನೆಂದೂ ಮುಖ್ಯವಾಗಿ ತನ್ನ ವಿಧೇಯತೆಗಳು ಸಲ್ಲಿಸತಕ್ಕ ದೇವನೊಬ್ಬನು ಇದ್ದಾನೆಂದೂ ಇಟ್ಟುಕೊಂಡಿರುವ ತಿಳಿವಳಿಕೆ ಅಥವಾ ನಂಬಿಕೆಯಾಗಿದೆ.[೧೭]

ಪ್ರಪಂಚದಾದ್ಯಂತ ಕಾಲದೇಶ ಪರಿಸರಕ್ಕನುಗುಣವಾಗಿ ಹಲವಾರು ಧರ್ಮಾಚರಣೆಗಳು ತಿಳಿದುಬಂದಿವೆ. ಕೆಲವು ಧರ್ಮಗಳು ಕಾಲಾನಂತರ ಕಾಲಗರ್ಭದಲ್ಲಿ ವಿಲೀನವಾಗಿವೆ. ಇನ್ನು ಕೆಲವು ತಮ್ಮ ತಮ್ಮ ತತ್ವಾದರ್ಶಗಳನ್ನು ಉಳಿಸಿಕೊಂಡು ಜೀವಂತವಾಗಿ ಮುನ್ನಡೆದಿವೆ. ಮಾನವ ಧರ್ಮವನ್ನು ಬಿಟ್ಟು ಬದುಕಲಾರ. ಅವನೊಂದಿಗೆ ಅವನ ಜೀವನ ವಿಧಾನ ಹೆಣೆದುಕೊಂಡಿದೆ. ಅವನ ಜೀವನ ಶೈಲಿಗೆ ಸುಸಂಬದ್ಧವಾದ ಸಾಮಾಜಿಕ ಪರಿಸರವನ್ನು ಧರ್ಮ ಒದಗಿಸಿಕೊಡುತ್ತದೆ.

ಧರ್ಮ ಆಯಾ ನಾಡಿನ ಜನರ ಸಾಮಾಜಿಕ, ಆರ್ಥಿಕ, ಜೀವನದ ಕಥನ.[೧೮] "ಧರ್ಮೋ ರಕ್ಷತಿ ರಕ್ಷಿತಃ" ನಾವು ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತದೆ ಎಂದು ಎಲ್ಲಾ ಧರ್ಮಗಳು ಸಾರಿ ಹೇಳುತ್ತವೆ.[೧೯] ಇಲ್ಲಿ ಪ್ರಮುಖವಾಗಿ ಶೈವ, ವೈಷ್ಣವ, ಜೈನ ಮತ್ತು ಇಸ್ಲಾಂ ಧರ್ಮಗಳು ಪ್ರಚಲಿತದಲ್ಲಿವೆ.

ಹಿಂದೂ ಧರ್ಮವು ಅತೀ ಪ್ರಾಚೀನ ಧರ್ಮವಾಗಿದೆ. ಋಗ್ವೇದದಲ್ಲಿ ಆರ್ಯರು ಅಗ್ನಿ, ಇಂದ್ರ, ವರುಣ, ಇತರ ದೇವತೆಗಳನ್ನು ಆರಾಧಿಸುತ್ತಿದ್ದರೆಂದು ತಿಳಿದು ಬರುತ್ತದೆ.[೨೦] ಆದರೆ ಋಗ್ವೇದ ಕಾಲದಲ್ಲಿ ಗಂಡು ದೇವತೆಗಳಿಗೆ ದೊರೆತ ಪ್ರಾಧಾನ್ಯತೆ ಹೆಣ್ಣು ದೇವತೆಗಳಿಗೆ ದೊರೆಯಲಿಲ್ಲ. ಉತ್ತರ ವೇದಗಳ ಕಾಲದಲ್ಲಿ ವಿಷ್ಣು ಪ್ರಾಮುಖ್ಯತೆಯನ್ನು ಪಡೆದುಕೊಂಡ. ನಂತರ ಹಿಂದೂ ಧರ್ಮವು ತನ್ನ ಅಸ್ತಿತ್ವದಲ್ಲಿ ಗೊಂದಲವಾದ ವಾತಾವರಣ ಸೃಷ್ಟಿಯಾದ್ದರಿಂದ ಕ್ರಿ.ಪೂ. ೬ನೇ ಶತಮಾನದಲ್ಲಿ ಜೈನ ಧರ್ಮ, ಬೌದ್ಧ ಧರ್ಮ ಹಾಗೂ ತದನಂತರದಲ್ಲಿ ಇಸ್ಲಾಂ ಧರ್ಮವೂ ಸಹ ಭಾರತದಲ್ಲಿ ಉಗಮವಾಗಿ ಧರ್ಮ ಪ್ರಸರಣದ ಕಾಲದಲ್ಲಿ ತೊಡಗಿತು. ಎಲ್ಲಾ ಧರ್ಮಗಳೂ ತಮ್ಮ ನೆಲೆಗಟ್ಟಿನಲ್ಲಿ ಅಸ್ತಿತ್ವವನ್ನು ಕಂಡುಕೊಂಡು ಎಲ್ಲಾ ಧರ್ಮಗಳೂ ಉಳಿದು ಸೌಹಾರ್ದತೆಯಿಂದ ಬಾಳಿ ಈ ನಾಡಿನ ಸಾಂಸ್ಕೃತಿಗೆ ಹಿರಿಮೆಗೆ ಒಂದು ಕೊಡುಗೆ ನೀಡಿದೆ. ದೇವಾಲಯಗಳ ರೂಪಾಂತರ ಕಾರ್ಯದಲ್ಲಿ ಮತೀಯ ಘರ್ಷಣೆಗಳುಂಟಾದರೂ ತಮ್ಮ ನೈತಿಕ ಮಟ್ಟವನ್ನು

ಉಳಿಸಿಕೊಂಡು ಬಂದಿರುವುದು ವೇದ್ಯವಾಗುತ್ತದೆ. ಪ್ರಸ್ತುತ ಪರಿಸರದಲ್ಲಿ ಕಂಡುಬರುವ ಪ್ರಮುಖ ಧರ್ಮಗಳ ಕುರುಹುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಶೈವಧರ್ಮ**

ಭಾರತದಲ್ಲಿ ಶೈವ ಧರ್ಮವು ಅತೀ ಪ್ರಾಚೀನವಾದ ಧರ್ಮವಾಗಿದೆ. ಇದರ ಪ್ರಾಚೀನತೆಯನ್ನು ಕ್ರಿ.ಪೂ. ೩೦೦೦ ವರ್ಷಗಳ ಸಿಂಧೂ ಸಂಸ್ಕೃತಿಯಲ್ಲಿಯೇ ಗುರುತಿಸಬಹುದಾಗಿದೆ. ಶೈವ ಧರ್ಮದ ಇತಿಹಾಸವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನಧರ್ಮ ಎಂಬುದನ್ನು ವ್ಯಕ್ತಪಡಿಸುತ್ತದೆ.[೨೧] ಋಗ್ವೇದದಲ್ಲಿ ಪಶುಪತಿಯು ರುದ್ರನೆಂದು ಪೂಜೆಗೊಳ್ಳುತ್ತಾನೆ. ಯಜುರ್ವೇದದ ಕಾಲಕ್ಕೆ ರುದ್ರನೇ ಶಿವನ ರೂಪ ಪಡೆದು ಶೈವ ಅದಿದೇವತೆಯಾದನೆಂದು ತಿಳಿದುಬರುತ್ತದೆ. ಈ ಕಾಲದಲ್ಲಿ ಶಿವನಿಗೆ ಶಂಕರ, ಮಹಾದೇವ, ಹೀಗೆ ಹಲವು ಹೆಸರುಗಳು ಬಂದಿವು.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಈ ಧರ್ಮ ಕದಂಬ ಮನೆತನದ ಪ್ರಾರಂಭದಿಂದಲೇ ಪ್ರಚಲಿತಗೊಂಡಿತು. ಈ ರೀತಿಯ ಶಿವನನ್ನು ಪೂಜಿಸುವ ಆರಾಧಿಸುವ ಪ್ರಕ್ರಿಯೆ ಆರಂಭಗೊಂಡಿತು. ಪ್ರಸ್ತುತ ಅಧ್ಯಯನದ ಕೋರಾ ಪರಿಸರವು ಧರ್ಮದ ಉಪ ಪಂಥಗಳಲ್ಲೊಂದಾದ ಶೈವ ಧರ್ಮವು ತನ್ನ ಅಸ್ತಿತ್ವನ್ನು ಉಳಿಸಿಕೊಂಡು ಬಂದಿದೆ. ಆಚಾರ ವಿಚಾರಗಳನ್ನು ಪ್ರಚಾರ ಮಾಡುತ್ತಾ ಬಂದಿದೆ. ಇದಕ್ಕೆ ಸಾಕ್ಷಿಗಳೆಂಬಂತೆ ಹಲವಾರು ಈಶ್ವರೀ ಸಂಬಂಧೀ ದೇವಾಲಯಗಳು ಗದ್ದಿಗೆಗಳು ಕಂಡು ಬರುತ್ತವೆ, ಇಂತಹ ಮಠಗಳು ಶೈಕ್ಷಣಿಕ ಕೇಂದ್ರಗಳಾಗಿ ಧಾರ್ಮಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಲಿವೆ.

**ಕೋರಾ ಪ್ರದೇಶದ ಪ್ರಮುಖ ವೀರಶೈವ ಮಠ**

ದಕ್ಷಿಣ ಭಾರತದಲ್ಲಿ ಪೂರ್ವ ಪರಂಪರೆಯಿಂದ ಬೆಳದುಬಂದಿದ್ದ ವೈದಿಕ ಪಂಥಗಳು ಮಠಗಳ ಮೂಲಕ ಧಾರ್ಮಿಕ ಪಂಥಗಳ ಜನರ ಚಟುವಟಿಕೆಗಳಿಗೂ ಗಮನ ಹರಿಸಿವೆ. ಈ ಹಿನ್ನಲೆಯಲ್ಲಿ ಶಂಕರಾಚಾರ್ಯರು ಅನೇಕ ಸನ್ಯಾಸಿಗಳು ವಾಸಿಸುವ ಕುಟೀರವನ್ನು (ಮಠ) ಸ್ಥಾಪಿಸದರು. ಈ ಮಠಗಳಲ್ಲಿ ಜ್ಞಾನದಾಸೋಹ ಮತ್ತು ಅನ್ನದಾಸೋಹ ಕಾರ್ಯಗಳು ನಿರಂತರವಾಗಿ ಜರುಗುತ್ತಿದ್ದವು. ಈ ಮಠವು ಧಾರ್ಮಿಕ ಕೇಂದ್ರವಾಗಿ, ಆಶ್ರಯ, ಗುರುಮನೆ, ಗುರುಕುಲವಾಗಿ, ಕಾಲಕ್ರಮೇಣ, ವಿದ್ಯಾಪ್ರಸಾರ, ಜ್ಞಾನಪ್ರಸಾರ ಮತ್ತು ಮತ ಪ್ರಸಾರ ಕೇಂದ್ರವಾಗಿ ಬೆಳೆದುಬಂದಿವೆ.

ದಾಸರ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಎಂಬ ಹಿತವಚನದಂತೆ ಸಮಾಜದಿಂದ ಮಠಕ್ಕೆ ಬಂದ ಆಸ್ತಿಯನ್ನು ಸಮಾಜದ ಪೋಷಣೆ, ಶಿಕ್ಷಣ ಮತ್ತು ಸಂಸ್ಕೃತಿಯ ಸಂವರ್ಧನೆಗೆ ವಿನಿಯೋಗಿಸಿದರು. ದೇವಾಲಯಗಳು ದೇವರ ಪೂಜಾಸ್ಥಾನವಾದರೆ ಮಠಗಳು ಸಂಸ್ಕೃತಿಯ ತಾಣವಾಗಿದ್ದವು ಈ ಮಠದ ಪ್ರಮುಖ ಉದ್ದೇಶ ಅನ್ನದಾಸೋಹ ನಂತರ ಜ್ಞಾನದಾಸೋಹವಾಗಿ ಪರಿವರ್ತನೆ ಹೊಂದಿತು. ಕೋರಾ ಪರಿಸರದಲ್ಲಿನ ಈ ವೀರಶೈವ ಮಠವು ಸ್ಥಳೀಯ ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯಿಕ

ಮತ್ತು ಸಾಮಾಜಿಕ ಬೆಳವಣಿಗೆಗೆ ಮಹತ್ತರವಾದ ಸಾಧನೆ ಮಾಡಿದೆ. ಈ ಶ್ರೀ ಅಟವೀಸ್ವಾಮಿ ಮಠದ ಸಂಸ್ಥಾಪನಾ ಯತಿಗಳು ಶ್ರೀ ಅಟವೀ ಸ್ವಾಮಿ ಯತಿಗಳು. ಚಿಕ್ಕತೊಟ್ಲುಕೆರೆಯ ಊರಿನಿಂದ ಸುಮಾರು ೧ ಮೈಲಿ ದೂರದ ಪ್ರಶಾಂತವಾದ ವಾತಾವರಣದಲ್ಲಿ ಕಂಗೊಳಿಸುತ್ತಿದೆ. ಇದು ಮತಪ್ರಚಾರ, ಜ್ಞಾನಪ್ರಸಾರ ಮತ್ತು ದಾಸೋಹ ಪ್ರಸಾರದಲ್ಲಿ ತೊಡಗಿಕೊಂಡಿದೆ. ಇಲ್ಲಿ ಭಾರತೀಯ ಗೋವಂಶ ಸಂರಕ್ಷಣೆ ಮತ್ತು ಸಂವರ್ಧನೆಗಾಗಿ ಹಳ್ಳಿಕಾರ್ ತಳಿ ಅಭಿವೃದ್ಧಿ ಕೇಂದ್ರವನ್ನು ೧೧-೦೨-೨೦೦೩ರಂದು ಸ್ಥಾಪಿಸಲಾಗಿದೆ.

ಭಾರತದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬು ಕೃಷಿ. ಕೃಷಿಯ ಬೆನ್ನೆಲುಬು ಗೋವುಗಳು. ಸಾವಿರಾರು ವರ್ಷಗಳಿಂದ ಭಾರತವು ಗೋವುಗಳನ್ನಾಶ್ರಯಿಸಿ ಬದುಕಿದೆ. ಶ್ರೀಮಂತವಾಗಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಗೋವುಗಳು ಭಾರತೀಯರ ಜೀವನದಲ್ಲಿ ಹಾಸುಹೊಕ್ಕಾಗಿದು ಇಂದಿಗೂ ಪೂಜ್ಯನಿಯ ಭಾವನೆ ಇದೆ. ಈ ನಿಟ್ಟಿನಲ್ಲಿ ಸಿ.ಟಿ. ಕೆರೆಯ ಶ್ರೀ ಅಟವೀ ಸ್ವಾಮಿ ಮಠ ಕಾರ್ಯ ಮಗ್ನವಾಗಿದೆ.

**ಶಿವಾನುಭವಿ ಕೋರಾದ ಲಿಂಗಣ್ಣ ತಾತನ ಗದ್ದಿಗೆ**

ಕೋರಾ ಪರಿಸರವು ಐತಿಹಾಸಿಕತೆಯ ಮಹತ್ವವನ್ನು ಹೊಂದಿರುವುದರ ಜೊತೆಗೆ ಸಾಂಸ್ಕೃತಿಕವಾಗಿ, ಸಂಸ್ಕೃತಿ ಪರಂಪರೆಯ ವೈಭವಗಳನ್ನು ಸಾರುವ ಪವಾಡಪುರುಷರ ನೆಲವೀಡೂ ಸಹ ಆಗಿದೆ. ಇಂತಹ ಪವಾಡ ಪುರುಷರಲ್ಲಿ ಒಬ್ಬರಾದವರೇ ಲಿಂಗಣ್ಣ ತಾತ. ನಮ್ಮ ಪುರಾತನವನ್ನು ನೆನಪು ಮಾಡುವಂತಹ ಶಿವಶರಣರು ತಮ್ಮ ಅನುಭವದ ಮೂಲಕ ಸಮಾಜದಲ್ಲಿ ನವಜಾಗೃತಿಯನ್ನು ಮೂಡಿಸಿದರು.

೧೮೨೧ರಲ್ಲಿ ಅಜ್ಜಗೊಂಡನಹಳ್ಳಿ ದೊಡ್ಡಮನೆ ಚನ್ನೇಗೌಡರು ಒಂದು ದಿನ ಮಧ್ಯಾಹ್ನದ ವೇಳೆಯಲ್ಲಿ ತಮ್ಮ ಜಮೀನಿನಲ್ಲಿ ದನಗಳನ್ನು ಮೇಯಿಸುತ್ತಿದ್ದಾಗ ಮೂರು ಜನ ಸ್ವಾಮಿಗಳು ಮತ್ತು ಮಹಾಲಿಂಗಣ್ಣ ಸ್ವಾಮಿಗಳು ಬಂದರು. ಅವರಲ್ಲಿ ಒಬ್ಬರು ಚನ್ನೇಗೌಡರ ಹೆಸರನ್ನೂ ಸಹ ಕರೆದರು. ಅಪರಿಚಿತರೊಬ್ಬರು ಹೆಸರು ಹಿಡಿದು ಕೂಗಿದ್ದನ್ನು ಕೇಳಿ ಆಶ್ಚರ್ಯ ಉಂಟಾಗಿ ಮೇಯಿಸುತ್ತಿದ್ದ ದನಗಳನ್ನು ಬಿಟ್ಟು ಕುಡಿಯಲು ಎಳನೀರು ತಂದುಕೊಟ್ಟನು. ಇಬ್ಬರಿಗೆ ಕೊಚ್ಚಿಕೊಟ್ಟರಂತೆ ಮಹಲಿಂಗಣ್ಣ ಸ್ವಾಮಿಗಳು ಮಾತ್ರ ಕೊಚ್ಚಬೇಡಿ ಹಾಗೇ ಕೊಡಿ ಎಂದು ತೆಗೆದುಕೊಂಡು ತಮ್ಮ ಹಸ್ತದಿಂದ ಒಮ್ಮೆ ಸವರಿ ಸಂತೃಪ್ತಿಯ ಉಸಿರನ್ನು ಬಿಟ್ಟರಂತೆ. ನಂತರ ಆ ಎಳನೀರನ್ನು ಕೊಚ್ಚಿ ನೋಡಿದಾಗ ಅದರಲ್ಲಿ ನೀರೇ ಇರಲಿಲ್ಲ. ನಂತರ ಮಹಲಿಂಗ ಸ್ವಾಮಿಗಳಿಗೆ ಪುಟ್ಟದಾದ ಮನೆಯನ್ನು ಕಟ್ಟಿಸಿಕೊಟ್ಟರಂತೆ. ಇಂದು ಇದೇ ಲಿಂಗಣ್ಣ ತಾತನ ಗದುಗೆ ಎಂದು ಪ್ರಸಿದ್ಧಿ ಪಡೆದಿದೆ. ಇವರು ಮುಂದೆ ಉದ್ಧಾನ ಶಿವಯೋಗಿ ಎಂಬ ಹೆಸರಿನಿಂದ ಶ್ರೀ ಅಟವೀ ಮಠದ ಅಧಿಪತ್ಯ ವಹಿಸಿ ೧೯೦೧ರಲ್ಲಿ ಲಿಂಗೈಕ್ಯರಾದರು. ತೊಟ್ಲಿಲು ಕೆರೆಯಲ್ಲಿ ಇವರ ಗದ್ದುಗೆ ಇದೆ.

## ವೈಷ್ಣವ ಧರ್ಮ

ಶಿವನಿಗೆ ಒಂದು ಪ್ರತ್ಯೇಕ ಅಸ್ತಿತ್ವವಿರುವಂತೆ ಹಿಂದೂ ಧರ್ಮದಲ್ಲಿ ಅವನಷ್ಟೇ ಪ್ರಬಲನಾದ ವಿಷ್ಣುವಿಗೂ ಒಂದು ಇತಿಹಾಸವಿದೆ. ವಿಷ್ಣುವಿನ ಆರಾಧನೆ ಜನಪ್ರಿಯವಾಗಿ ಬೆಳೆದು ಬಂದಿದೆ.[೨೩] ಋಗ್ವೇದದಲ್ಲಿ ವಿಷ್ಣು ತನ್ನ ಮೂರು ಹೆಜ್ಜೆಗಳಿಂದ ಇಡೀ ಸಮಸ್ತ ಲೋಕವನ್ನೇ ಅಳೆಯುವ ವಿಷಯವನ್ನು ಪ್ರಸ್ತಾಪಿಸಲಾಗಿದೆ.[೨೪] ವೈಷ್ಣವ ಧರ್ಮ ದಕ್ಷಿಣ ಭಾರತದಲ್ಲಿ ಕ್ರಿ.ಪೂ.ದಲ್ಲೇ ಇತ್ತೆಂಬ ಬಗ್ಗೆ ನಾನಾಘಟ ಶಾಸನ ಉತ್ತಮ ನಿದರ್ಶನವಾಗಿದೆ.[೨೫] ಶತಪಥ ಬ್ರಾಹ್ಮಣ ತೈತ್ತರೀಯ, ಬ್ರಾಹ್ಯ, ಅರಣ್ಯಕಗಳು, ಉಪನಿಷತ್‌ಗಳು, ಮಹಾಭಾರತ, ಭಗವದ್ಗೀತೆ, ವಾತ್ಯಾಯನನ ಧರ್ಮಸೂತ್ರ, ಪಾಣಿನಿಯ ಅಷ್ಟಾಧ್ಯಾಯ, ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕ, ಮೊದಲಾದ ಗ್ರಂಥಗಳಲ್ಲೂ ವಿಷ್ಣುವಿನ ವಿವಿಧ ಹೆಸರುಗಳು, ರೂಪಗಳು, ಅವತಾರಗಳು, ಈ ಧರ್ಮಕ್ಕೆ ಭಾಗವತ ಧರ್ಮ, ವೈಷ್ಣವ, ಧರ್ಮ ಎಂಬ ಶಬ್ದಗಳು ಲಭ್ಯವಾಗಿವೆ. ಇದಲ್ಲದೆ ಇತರ ದೇವತೆಗಳೊಂದಿಗೆ ಮಾಡಿದ ಸಮೀಕರಣ ಸಿದ್ಧಾಂತ, ದರ್ಶನ, ಆಚಾರ, ವಿಚಾರ ಮೊದಲಾದ ಸಂಗತಿಗಳು ಪ್ರಸ್ತಾಪವಾಗಿವೆ.[೨೬]

ಈ ನಾಡಿನಲ್ಲಿ ಕ್ರಿಸ್ತಶಕ ಪ್ರಾರಂಭದಿಂದಲೂ ಮೇಲಿನ ಎರಡು ಪಂಥಗಳ ಪ್ರಭಾವ ಗೋಚರಿಸುತ್ತವೆ. ಕನ್ನಡನಾಡಿನ ಹಲ್ಮಿಡಿ ಶಾಸನ (ಕ್ರಿ.ಶ. ೪೫೦)ರ ಶಾಸನವು ಐತಿಹಾಸಿಕ ದೃಷ್ಟಿಯಿಂದ ಈ ಧರ್ಮದ ಪ್ರಥಮ ಆಕರವಾಗಿದೆ. ಈ ನಾಡನ್ನಾಳಿದ ಕದಂಬ, ಚಾಳುಕ್ಯ, ಹೊಯ್ಸಳ ವಿಜಯನಗರ, ಮೊದಲಾದ ಅರಸು ಮನೆತನಗಳು ಈ ಧರ್ಮದ ಸರ್ವತೋಮುಖದ ಬೆಳವಣಿಗೆಗೆ ಶ್ರಮಿಸಿದ ವಿಚಾರ ಗೋಚರಿಸುತ್ತದೆ. ಕ್ರಿ.ಶ. ೧೧ನೇ ಶತಮಾನದಿಂದೀಚೆಗೆ ರಾಮಾನುಜಾಚಾರ್ಯರು ಈ ನಾಡಿನಲ್ಲಿ ಭಾಗವಥ ಪಂಥದ ಹಿನ್ನೆಲೆಯಲ್ಲಿ ಈ ವೈಷ್ಣವ ಧರ್ಮವನ್ನು ಪ್ರಸರಣಗೊಳಿಸಿದ. ನಂತರ ಮಧ್ವಾಚಾರ್ಯರು, ಹರಿದಾಸ ಪರಂಪರೆಯ ಮೂಲಕ ಮುಂದುವರೆಸಿಕೊಂಡು ಬಂದರು. ಕ್ರಿ.ಶ. ಅರಂಭದಿಂದ ೧೨ನೇ ಶತಮಾನದವರೆಗೂ ಶೈವ ಮತ್ತು ವೈಷ್ಣವ ಧರ್ಮಗಳು ಪರಸ್ಪರ ಸಾಮರಸ್ಯದಿಂದ ಬೆಳೆದು ಬಂದಿದೆ.[೧೭] ಪ್ರಸ್ತುತ ಅಧ್ಯಯನವನ್ನು ಕೋರಾ ಪರಿಸರಕ್ಕೆ ಸೀಮಿತಗೊಳಿಸಿಕೊಂಡು ಪ್ರಸ್ತಾಪಿಸಲಾಗಿದೆ. ಚಿನಗದಲ್ಲಿ ಸ್ಥಾಪಿಸಲಾಗಿರುವ ರಂಗನಾಥ ದೇವಾಲಯವು ವೈಷ್ಣವ ಪರಂಪರೆಯ ದೇವಾಲಯವಾಗಿದೆ. ಅದೇ ರೀತಿ ಚಿನಗದ ಆಂಜನೇಯಸ್ವಾಮಿ ದೇವಾಲಯ, ಗೊಲ್ಲಹಳ್ಳಿಯ ಆಂಜನೇಯಸ್ವಾಮಿ ದೇವಾಲಯ ಜಕ್ಕೇನಹಳ್ಳಿಯ ಮುತ್ತುರಾಯಸ್ವಾಮಿ ದೇವಾಲಯ ದೇವಲಾಪುರದ ದಶರಥನ ದೇವಾಲಯ, ವೈಷ್ಣವ ಪಂಥಕ್ಕೆ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಅದೇ ರೀತಿ ಇದಕ್ಕೆ ಪೂರಕವಾಗಿ ಇಲ್ಲಿನ ಮೂರ್ತಿ ಶಿಲ್ಪಗಳು, ದೇವಲಾಪುರದ ವಿಷ್ಣು ಶಿಲ್ಪಗಳು, ಕಂಬದ ನರಸಿಂಹ ಮೂರ್ತಿ ಶಿಲ್ಪ, ಆಂಜನೇಯನ ಮೂರ್ತಿ ಶಿಲ್ಪಗಳು, ಇನ್ನೂ ಮುಂತಾದ ಮೂರ್ತಿ ಶಿಲ್ಪಗಳ ಆರಾಧನೆ ವೈಷ್ಣವ ಧರ್ಮ ನಿದರ್ಶನಕ್ಕೆ ಸಾಕಾರ ಮೂರ್ತಿಗಳಾಗಿವೆ. ಇವುಗಳ ಪ್ರಸ್ತುತ ಪ್ರದೇಶದಲ್ಲಿ ವೈಷ್ಣವ ಧರ್ಮವಿತ್ತೆಂಬುದಕ್ಕೆ ಸಾಕ್ಷಿಗಳಾಗಿವೆ.

## ಜೈನಧರ್ಮ

ಕ್ರಿ.ಶ. ೬ನೇ ಶತಮಾನದಲ್ಲಿ ಉದಯಿಸಿದ ಜೈನಧರ್ಮವು ಭಾರತದ ಇತಿಹಾಸದಲ್ಲಿ ತನ್ನದೇ ಆದ ಅಸ್ತಿತ್ವನ್ನು ಹೊಂದಿತ್ತು. ವಿಜಯನಗರ ಕಾಲದಲ್ಲಿ ಜೈನ ಧರ್ಮವು ಒಂದು ಪ್ರಮುಖವಾದ ಧರ್ಮವಾಗಿತ್ತು. ಜಿನನಿಂದ ಬೋಧಿಸಲ್ಪಟ್ಟ ಧರ್ಮವೇ ಜೈಧರ್ಮ. ಈ ಧರ್ಮದ ಪರಮ ಗುರಿ ಆತ್ಮಜ್ಞಾನ. ಮೋಕ್ಷವನ್ನು ಪಡೆಯುವುದೇ ಆಗಿತ್ತು. ದೇಹವನ್ನು ಕಠಿಣ ಪರಿಶ್ರಮಗಳಿಂದ ದಂಡಿಸಿ ಮೋಕ್ಷ ಪಡೆಯಬೇಕು. ಯೋಗಕ್ಕೆ ಇಲ್ಲಿ ಪ್ರಮುಖ ಸ್ಥಾನವಿದೆ. ಕರ್ನಾಟಕದಲ್ಲಿ ಜೈನಧರ್ಮವು ಕ್ರಿ.ಪೂ. ೩೦೦ರ ವೇಳೆಗೆ ನೆಲಗೊಂಡಿತ್ತು. ದಕ್ಷಿಣ ಕರ್ನಾಟಕದಲ್ಲಿ ಜೈನ ಧರ್ಮವು ಶ್ರವಣ ಬೆಳಗೊಳ ಮತ್ತು ಉತ್ತರ ಕರ್ನಾಟಕದಲ್ಲಿ ಕೊಪ್ಪಳಗಳಲ್ಲಿ ಹೆಚ್ಚಾಗಿ ನೆಲೆ ನಿಂತಿತ್ತು. ಇವು ಪ್ರಸಿದ್ಧ ಜೈನ ಕೇಂದ್ರಗಳಾಗಿದ್ದವು. ಜೈನಧರ್ಮವು ೨೪ ಜನ ತೀರ್ಥಂಕರರಿಂದ ಜನ್ಮ ತಾಳಿದುದಾಗಿದೆ. ಈ ಧರ್ಮದ ವಂಶ ಸ್ಥಾಪಕ ವೃಷಭನಾಥ, ೨೩ ಮತ್ತು ೨೪ನೇ ತೀರ್ಥಂಕರರು ಐತಿಹಾಸಿಕ ವ್ಯಕ್ತಿಗಳಾಗಿದ್ದಾರೆ. ಇದರಲ್ಲಿ ಕೊನೆಯ ತೀರ್ಥಂಕರ ವರ್ಧಮಾನ ಮಹಾವೀರ. ಈತನ ಹಿಂದೆ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನು ಕ್ರಿ.ಪೂ ೮ನೇ ಶತಮಾನದಲ್ಲಿ ಬಾಳಿ ಬದುಕಿದ್ದನು. ಜೈನಧರ್ಮದ ಪ್ರಮುಖ ಕೇಂದ್ರವಾಗಿ ತುಮಕೂರು ತನ್ನ ನೆಲಯನ್ನು ಉಳಿಸಿಕೊಂಡಿದೆ. ಇದಕ್ಕೆ ಪ್ರತೀತಿ ಎಂಬಂತೆ ಕುಚ್ಚಂಗಿಯಲ್ಲಿ ಜೈನ ಧರ್ಮ ಸ್ಮಾರಕವನ್ನು ಕಾಣಬಹುದು. ಇಲ್ಲಿ ಜೈನಧರ್ಮ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ.

## ಇಸ್ಲಾಂ ಧರ್ಮ

ಇಸ್ಲಾಂ ಎಂದರೆ ದೇವರ ಇಚ್ಛೆಗೆ ಶರಣಾಗುವುದು ಎಂದರ್ಥ. ಖುರಾನಿನಲ್ಲಿ ಈ ಧರ್ಮಕ್ಕೆ ಇಸ್ಲಾಂ ಎಂದು ಕರೆಯಲಾಗುತ್ತದೆ. 'ಶಾಂತಿಯನ್ನು ಉಂಟು ಮಾಡುವ ಧರ್ಮವೇ ಇಸ್ಲಾಂ ಧರ್ಮ' ಎಂದರ್ಥ. ಈ ಧರ್ಮಕ್ಕೆ ಮಹಮ್ಮದೀಯ ಅಥವಾ ಅಹಮ್ಮದೀಯ ಧರ್ಮವೆಂತಲೂ ಕರೆಯುತ್ತಾರೆ. ಈ ಧರ್ಮ ದಕ್ಷಿಣ ಭಾರತದಲ್ಲಿ ಕಾಲಿಟ್ಟಿದ್ದು ಅಲ್ಲಾಉದ್ದೀನನ ಕಾಲದಲ್ಲಿ ಪ್ರಸ್ತುತ ಅಧ್ಯಯನ ಕೋರಾ ಹೋಬಳಿ ಪರಿಸರಕ್ಕೆ ಸೀಮಿತವಾಗಿರುವುದರಿಂದ ಇಲ್ಲಿನ ಇಸ್ಲಾಂ ಧರ್ಮದ ಪ್ರಸ್ತಾವನೆಯನ್ನು ಮಾಡಲಾಗಿದೆ.

## ಮಸೀದಿಗಳು

ಮುಸ್ಲಿಂ ಪರಂಪರೆಯ ವಾಸ್ತು ನಿರ್ಮಾಣವನ್ನು ಮುಸ್ಲಿಂ ವಾಸ್ತುಕಲೆ ಎಂಬ ಹೆಸರಿನಿಂದಲೇ ಕರೆಯಲಾಗಿದೆ. ಅದು ಹಿಂದೂ ವಾಸ್ತುಕಲೆಯಿಂದ ಪ್ರಭಾವಿತಗೊಂಡಿದೆ. ಧಾರ್ಮಿಕ ದೃಷ್ಟಿಯಿಂದ ಇದನ್ನು ಪ್ರಾರ್ಥನಾ ಮಂದಿರವೆಂದೂ ಕರೆಯುವ ವಾಡಿಕೆಯುಂಟು. ಈ ಮಸೀದಿಗಳು ಸಾಮಾನ್ಯವಾಗಿ ಮೆಕ್ಕಾದ ಕಡೆಗೆ ಅಭಿಮುಖವಾಗಿರುತ್ತದೆ. ಇದು ಅನೇಕ ಸ್ತಂಭಗಳನ್ನು ಹೊಂದಿದ್ದು ಹೊರಾಂಗಣ ವಿಶಾಲವಾಗಿರುತ್ತದೆ. ಪ್ರಸ್ತುತ ಕೋರಾ ಪರಿಸರದ ಗೇರೆಹಳ್ಳಿ, ಬೆಳಧರ, ಕೋರಾ, ಕೆಸ್ತೂರು, ಬ್ರಹ್ಮಸಂದ್ರ, ಬೊಮ್ಮನಹಳ್ಳಿ, ಚಿಕ್ಕತೊಟ್ಲುಕೆರೆ, ದೇವಲಾಪುರ ಮುಂತಾದ ಗ್ರಾಮಗಳಲ್ಲಿ ಮಸೀದಿ ಮಂದಿರಗಳು ಸಾಕ್ಷಿಗಳಾಗಿ ನಿಂತಿವೆ. ಇವೆಲ್ಲಾ ಮಸೀದಿಗಳು ಇಂಡೋ ಇಸ್ಲಾಮಿಕ್ ಶೈಲಿಯ ವಾಸ್ತು ಶೈಲಿಯ ಮಿಶ್ರಣವನ್ನು ಕಾಣಬಹುದು.

## ೫.೫. ಜಾನಪದ ವೈಶಿಷ್ಟ್ಯತೆಗಳು

ಜಾನಪದ ಎಂಬುದು ಮಾನವನ ಉಗಮದೊಂದಿಗೆ ವಿಕಾಸ ಹೊಂದಿ ಕೇವಲ ಕಂಠಪಾಠದ ಮೂಲಕ ಮಾನವನ ಅವ್ಯಾಹತ ಬದುಕನ್ನು ದಾಖಲಿ ಮುಂದುವರೆಯುವ ಜೀವಂತ ಪ್ರಕ್ರಿಯೆಯಾಗಿದೆ.[೨೮] ಒಂದು ಸಮಾಜದ ಸಾಂಪ್ರದಾಯಿಕ ಮನೆಗಳು, ಕಣಜಗಳು, ಕೋಟೆ, ಕೊತ್ತಲಗಳು, ಮನೆ ಬಳಕೆ ವಸ್ತುಗಳು, ಮಡಿಕೆ ಕುಡಿಕೆ ಇವೆಲ್ಲವೂ ಜಾನಪದ ಎನಿಸಿಕೊಳ್ಳುತ್ತವೆ.[೨೯] ಜಾನಪದವು ವ್ಯಕ್ತಿಯ ಜೀವನದ ಅವಿಭಾಜ್ಯ ಅಂಗವಾಗಿದ್ದು ಇದು ಗತಕಾಲದ ವಿಷಯವನ್ನಷ್ಟೇ ನಮಗೆ ತಿಳಿಸದೆ ಇದೊಂದು ಎಂದೂ ಬತ್ತದ ಜೀವಂತ ನದಿಯಾಗಿದೆ.

ಮಾನವನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾನಪದ ಎಂಬುದು ಎಂದೂ ನಿಲ್ಲದ ಹರಿಯುವ ನೀರಿನಂತಾಗಿದೆ. ಸ್ಮಿತ್ ಥಾಂಸನ್‌ರವರ ಪ್ರಕಾರ ಜಾನಪದ ಎಂಬುದು "ಮೌಖಿಕವಾಗಿ ಹರಿದುಬಂದಿರುವ ನೆನಪುಗಳು ಅಥವಾ ಆಚರಣೆಗಳು.[೩೦] ವಿಲಿಯಂ ಆರ್. ಭಾಸ್ಕರ್‌ರವರು 'ಪುರಾಣಗಳು, ಐತಿಹ್ಯಗಳು, ಕಥೆ, ಒಗಟುಗಳು ಹಾಗೂ ಗೀತೆಗಳನ್ನು ಜಾನಪದ ಎಂದಿದ್ದಾರೆ. ಜೋಗಸ್ ಬೇಲಿಸ್‌ರವರು "ಇದು ಸಾಂಪ್ರದಾಯಿಕ ವಿಜ್ಞಾನ ಹಾಗೂ ಜಾನಪದ ಕಾವ್ಯ ಎಂದಿದ್ದಾರೆ. [೩೧] ಒಟ್ಟಿನಲ್ಲಿ ಜಾನಪದ ಕಲೆ ಎಂಬುದು ಮಾನವನ ಸಾಮಾಜಿಕ ಜೀವನದಲ್ಲಿ ವಿಶಾಲವಾದ ಅರ್ಥವನ್ನು ಪಡೆದುಕೊಂಡಿದೆ. ಆಂಗ್ಲಭಾಷೆಯಲ್ಲಿ ಇದನ್ನು ಈಟಂಇಟಂಡಿಜ ಎಂಬುದಾಗಿ ಕರೆದಿದ್ದಾರೆ. ವಿಲಿಯಂ ಎಂಬುವನು ಈ ಶಬ್ದವನ್ನು ೧೮೪೬ರಲ್ಲಿ ಮೊಟ್ಟ ಮೊದಲಿಗೆ ಬಳಕೆಗೆ ತಂದನು.

ಜಾನಪದ ಎಂಬುದು ಪ್ರಾಚೀನವಾದ ಕಲೆಯಾದರೂ ಇದೊಂದು ಜೀವಂತ ಪಳೆಯುಳಿಕೆಯಾಗಿರುತ್ತದೆ. ಜಾನಪದ ಎಂಬುದು ಜನಪದನವನ್ನು ಮಾತ್ರ ಕುರಿತ ಅಧ್ಯಯನವಲ್ಲ. ಇದು ಜನಪದ ಸಂಪ್ರದಾಯವನ್ನು ಕುರಿತ ಅಧ್ಯಯನ.[೩೨] ಹೀಗೆ ಜಾನಪದ ಸಾಂಪ್ರದಾಯಿಕ ರೀತಿಯ ಜನಜೀವನವನ್ನು ಕಟ್ಟುವಲ್ಲಿ ಸಹಕಾರಿಯಾಗಿದೆ. ಈ ಹಿನ್ನಲೆಯಲ್ಲಿ ಕೋರಾ ಹೋಬಳಿ ಪರಿಸರವನ್ನು ಸೀಮಿತವಾಗಿಸಿಕೊಂಡು ಇಲ್ಲಿನ ಐತಿಹಾಸಿಕ ಜೀವನ ಶೈಲಿಯಿಂದ ಹೊರತುಪಡಿಸಿ ಜಾನಪದ ಜೀವನ ಶೈಲಿಯ ನಿರೂಪಣೆಯನ್ನು ಕಟ್ಟಿಕೊಡುವುದೇ ಈ ಅಧ್ಯಯನದ ಉದ್ದೇಶ.

### ಜಾನಪದ ಕಲೆಗಳು

ಜಾನಪದ ಕಲೆ ಎಂಬುದು ಮಾನವನಿಗೆ ನಿಸರ್ಗ ನೀಡಿದ ಸಹಜವಾದ ಕೊಡುಗೆಯಾಗಿದ್ದು, ಜೀವನವನ್ನು ನಡೆಸಿಕೊಂಡು ಬಂದ ಗ್ರಾಮೀಣ ಜನತೆಯ ಕಲೆಯಾಗಿದೆ. ಮಾನವನ ಸಂಸ್ಕೃತಿಯ ನೈಜ ಬೇರುಗಳು ಜನಪದ ನೆಲೆಯಲ್ಲಿ ಹುದುಗಿರುವುದರಿಂದ ಇತಿಹಾಸ ರಚನೆಯಲ್ಲಿ ಜನಪದವು ಪ್ರಮುಖ ಸ್ಥಾನವನ್ನು ಗಳಿಸಿದೆ. ಜನಪದರ ಜೀವನ ಶೈಲಿಯ ಬದುಕು ಮೌಖಿಕ ಆಚರಣೆಯ ರೂಪದಲ್ಲೇ ಬೆಳೆದು

ಬಂದಿತು. ಜಾನಪದವು ಜನತೆಯಿಂದ ಹುಟ್ಟಿದ ಮತ್ತು ಜನತೆಗಾಗಿ ಇರುವ ಸೊತ್ತು.[೩೩] ಜನತೆಯ ಬದುಕಿನ ರೀತಿ ಕಟ್ಟಿದ ಕಥೆಯೇ ಇತಿಹಾಸ. ಇತಿಹಾಸದ ಬದುಕಿನಲ್ಲಿ ಬೆಳೆದು ಬಂದುದೇ ಕಲೆ.[೩೪] ಪ್ರಸ್ತುತ ಕೋರಾ ಹೋಬಳಿ ಪರಿಸರದಲ್ಲಿ ಸಾಮಾಜಿಕ ಜೀವನದಲ್ಲಿ ಜಾನಪದ ಕಲೆಯ ವೈವಿಧ್ಯತೆಯ ಚಿತ್ರಣವನ್ನು ಇಲ್ಲಿ ನೀಡಲಾಗಿದೆ.

## ನಂದಿ ಧ್ವಜ ಕುಣಿತ

ಹಬ್ಬ ಹರಿದಿನ, ಜಾತ್ರೆ ಮತ್ತು ಫಲಪೂಜೆಯ ವೇಳೆಯಲ್ಲಿ ಕಲಾವಿದ ನಂದಿಧ್ವಜ ಕುಣಿತ ಮಾಡುತ್ತಾರೆ. ನಂದಿ ಧ್ವಜವನ್ನು ನಂದಿಕಂಬ, ನಂದಿಕೋಲು, ಬರಡೆಕಂಬ, ನಂದಿಪಟ, ವ್ಯಾಸಗೋಲು ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಪ್ರಸ್ತುತ ಪರಿಸರದಲ್ಲಿ ವೀರಶೈವ ಮತ್ತು ನಾಯಕ ಸಮುದಾಯದವರು ಧಾರ್ಮಿಕ ಉತ್ಸವ, ಜಾತ್ರೆ, ಮದುವೆ ಮುಂತಾದ ಶುಭ ಸಂದರ್ಭದಲ್ಲಿ ಈ ಧ್ವಜವನ್ನು ಪ್ರದರ್ಶಿಸುತ್ತಾರೆ. ಈ ಕುಣಿತ ಮೂಲತಃ ಶಿವನಿಗೆ ಸಂಬಂಧಿಸಿದೆ. ನಂದಿಧ್ವಜ ಕೋಲಿನಲ್ಲಿ ಕಾಣುವ ಬುರುಡೆಯಾಕಾರದ ರಚನೆಗಳು ವೀರಭದ್ರನಿಂದ ಕೊಲ್ಲಲ್ಪಟ್ಟ ದಕ್ಷಬ್ರಹ್ಮ ಹಾಗೂ ಅನುಯಾಯಿಗಳ ಮೇರೆಗೆ ಸಾಧಿಸಿದ ವಿಜಯದ ಸಂಕೇತ.[೩೫] ಇದು ಜನಪದ ಕಲೆಗಳಲ್ಲೇ ಗಂಡು ಕಲೆ ಎಂದು ಪ್ರಸಿದ್ಧಿಯಾಗಿದೆ.

## ಚೌಡಿಕೆ

ಚೌಡಿಕೆ ಎಂಬುದು ಪ್ರಸ್ತುತ ಪರಿಸರದಲ್ಲಿ ಜೋಗಯ್ಯ ಜೋಗತಿಯರು ಸೇರಿ ನೀಡುವ ಕಲಾ ಪ್ರದರ್ಶನ. ಊರಿನ ಗ್ರಾಮ ದೇವತೆಗಳನ್ನು ಹೊಗಳಿ, ರೇಗಿಸಿ, ಅಶ್ಲೀಲವಾಗಿ ಬೈಯುವ ಪ್ರಸಂಗಗಳು ಈ ಕಲೆಯಲ್ಲಿದೆ. ಪ್ರಸ್ತುತ ಪರಿಸರದಲ್ಲಿ ಗ್ರಾಮದೇವತೆಗಳ ಜಾತ್ರೆಯ ಸಂದರ್ಭದಲ್ಲಿ ಪರಿಶಿಷ್ಟ ಜಾತಿಯ ಪಂಗಡಕ್ಕೆ ಸೇರಿದ ಒಬ್ಬ ಹಿರಿಯ ಮುಖಂಡರು ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಇದು ಗ್ರಾಮ ದೇವತೆಗಳ ಉತ್ಸವಗಳಲ್ಲಿ ಅಥವಾ ದೇವೀ ಜಾತ್ರೆಗಳ ಸಂದರ್ಭದಲ್ಲಿ ಈ ಚೌಡಿಕೆ ವಾದ್ಯದ ಮೂಲಕ ಐತಿಹ್ಯ ಹೇಳುವುದು ಇಂದು ಜಾರಿಯಲ್ಲಿದೆ.

## ಮಾರಮ್ಮನ ಕುಣಿತ

ಕೋರಾ ಪರಿಸರದ ಪ್ರತಿಯೊಂದು ಗ್ರಾಮದಲ್ಲೂ ಮಾರಮ್ಮನ ಕುಣಿತದ ಪದ್ಧತಿಯು ಬೆಳೆದು ಬಂದಿದೆ. ಮಾರಮ್ಮನನ್ನು ಹೊತ್ತು ತರುವಾಗ ಭಾವಟಿಯಿಂದ ಮೈಯೆಲ್ಲಾ ಹೊಡೆದುಕೊಳ್ಳುತ್ತಾರೆ. ಪಟ್ಟಣದ ಎಲ್ಲಮ್ಮ, ಊರಮ್ಮ, ಕಾಳಮ್ಮ ದೇವಾಲಯಗಳ ಮುಂದೆ ಉತ್ಸವ ಕಾಲದಲ್ಲಿ ಈ ಕುಣಿತವನ್ನು ಮಾಡುವ ಪದ್ಧತಿ ಇದೆ.

### ವೀರಭದ್ರನ ಕುಣಿತ

ಈ ಜನಪದ ಕಲೆಯು ವೀರಶೈವ ಧರ್ಮದವರ ಗಂಡು ಕಲೆಯಾಗಿದೆ. ವೀರಶೈವ ಪರಂಪರೆಯಲ್ಲಿ ಇದೊಂದು ಪ್ರದರ್ಶನಾತ್ಮಕ ಕಲೆಯಾಗಿ ಉಳಿದಿದೆ. ಇದು ಬಹಳ ಪ್ರಾಚೀನವಾದುದು. ಪುರಾಣದಲ್ಲಿ ಬರುವ ಈ ವೀರಭದ್ರನ ಅವತಾರದ ಬಗ್ಗೆ ಹಾಗೂ ಅವನ ವೀರತ್ವದ ಪರಿಯನ್ನು ಭಕ್ತರು ಕುಣಿತದ ರೂಪದಲ್ಲಿ ಪ್ರದರ್ಶಿಸುತ್ತಾರೆ. ಈ ಕುಣಿತದಲ್ಲಿ ಕನಿಷ್ಟ ೮ ಮಂದಿ ಕಲಾವಿದರಿರುತ್ತಾರೆ. ಇವರು ತಲೆ ಪೇಟ, ಹಣೆಗೆ ವಿಭೂತಿ, ಕೊರಳಿಗೆ ರುದ್ರಾಕ್ಷಿ ಮಾಲೆ ಹಾಗೂ ನಾಗಾಭರಣ ಎದೆಗೆ ವೀರಭದ್ರದೇವನ ಹಲಗೆ ಸೊಂಟಕ್ಕೆ ದಕ್ಷಬ್ರಹ್ಮನ ಶಿರವನ್ನು ಕಟ್ಟಿಕೊಳ್ಳುತ್ತಾರೆ. ಬಲಗೈಯಲ್ಲಿ ಕತ್ತಿ, ಕಡಗ, ಕರವಸ್ತ್ರ, ಕೊರಳಲ್ಲಿ ಸಿಂಹಲಾಂಛನವುಳ್ಳ ಸರ. ಮೈಮೇಲೆ ಕಾವಿಜುಬ್ಬ ಮತ್ತು ಕಾವಿಯ ಕಾಸಿಗೆ ಹಾಕುತ್ತಾರೆ. ಕಾಸೇ ಕಟ್ಟಿದವರೇ ಈ ಕಲೆಯ ಪ್ರಮುಖ ಕಲಾವಿದರಾಗಿರುತ್ತಾರೆ. ಇದನ್ನೇ ವೀರಗಚ್ಚೆ, ವೀರಗಾಸೆ – ವೀರಕಾಸ ಎನ್ನುತ್ತಾರೆ.

### ಕೋಲಾಟ

ಕೋಲಾಟ ಕಲೆಯು ಜನಪದ ಕಲೆಗಳಲ್ಲೇ ಅತ್ಯಂತ ಪ್ರಸಿದ್ಧವಾದ ಜನಪದ ಕಲಾ ಶೈಲಿಯಾಗಿದೆ. ಇದೊಂದು ಜನಪ್ರಿಯ ಕಲೆ.[೩೬] ಈ ಕಲೆ ಎಲ್ಲಾ ಜಾತಿಯ ಜನರಲ್ಲೂ ಕಾಣಬರುತ್ತದೆ. ಇದನ್ನು ಹಬ್ಬ ಹುಣ್ಣಿಮೆ, ಜಾತ್ರೆ, ಉತ್ಸವ, ಸುಗ್ಗಿ ಆಚರಣೆಯ ಸಂದರ್ಭದಲ್ಲಿ ಕೋರಾ ಪರಿಸರದ ಪ್ರತಿಯೊಂದು ಗ್ರಾಮದಲ್ಲೂ ಈ ಆಟವನ್ನು ಆಡುತ್ತಾರೆ. ಈ ಜನಪದ ಕಲೆ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ತಮ್ಮ ದೈನಂದಿನ ಉಡುಗೆಯಲ್ಲಿ ಕೆಲವೊಮ್ಮೆ ತಲೆಗೆ ಪಟ್ಟಿ, ಸೊಂಟಕ್ಕೆ ವಸ್ತ್ರ, ಕಾಲಿಗೆ ಗೆಜ್ಜೆ ಕಟ್ಟಿಕೊಂಡಿರುತ್ತಾರೆ. ಕೋಲಾಟದ ಕಡ್ಡಿಗಳನ್ನು ಶ್ರೀಗಂಧ, ಹೊನ್ನೆ, ಕಾರೆ, ಆಲದ ಮರದಿಂದ ತಯಾರಿಸಿರುತ್ತಾರೆ.

### ಭಜನೆ ಮಾಡುವುದು

ಇದೊಂದು ಸಭೆ, ಸಮಾರಂಭದ ಹಬ್ಬ ಹರಿದಿನಗಳಲ್ಲಿ ನಡೆಯುವ ಕಾರ್ಯಕ್ರಮವಾಗಿದೆ. ಇದು ಎಲ್ಲಾ ಜಾತಿಗಳಲ್ಲೂ ದೇವಾಲಯಗಳಲ್ಲಿ ನಡೆಯುತ್ತಿರುವುದನ್ನು ಈಗಲೂ ಕಾಣಬಹುದು. ಸೋಮವಾರ, ಶುಕ್ರವಾರ, ಶನಿವಾರ ದಿನಗಳು ಭಜನೆಗೆ ಒಳ್ಳೆಯ ದಿನಗಳೆಂದು ನಂಬಲಾಗಿದೆ. ಮುಖ್ಯ ಹಾಡುಗಾರರ ಜೊತೆಗೆ ಹಿಮ್ಮೇಳದವರೂ, ಉಳಿದವರೂ ಸಹಕರಿಸುತ್ತಾರೆ. ಹಾರ್ಮೋನಿಯಂ, ತಾಳ, ಗೆಜ್ಜೆ, ತಮಟೆ, ಡೋಲಕ್, ಖಂಜರಿ ಮುಂತಾದ ವಾದ್ಯಗಳನ್ನು ಭಜನೆ ಮೇಳದಲ್ಲಿ ಬಳಸುತ್ತಾರೆ. ಒಂದು ತಿಂಗಳ ಕಾಲ ಮಳೆ ಬಾರದಿದ್ದಲ್ಲಿ ಒಂದು ತಿಂಗಳ ಕಾಲ ಭಜನೆ ಮಾಡುತ್ತಾರೆ. ಶಿಶುನಾಳ ಶರೀಫನ ಪದಗಳು ಶರಣ ತತ್ವ ಪದಗಳು, ಬಸವನ ವಚನಗಳು ಮತ್ತು ದಾಸರ ಕೀರ್ತನೆಗಳನ್ನು ಹಾಡುತ್ತಾರೆ.

### ಜಾನಪದ ಕ್ರೀಡೆಗಳು

ಕೋರಾ ಪರಿಸರದ ಪ್ರತಿಯೊಂದು ಗ್ರಾಮದ ಜನತೆಯ ಜೀವನವು ಜನಪದ ಕ್ರೀಡೆಗಳೊಂದಿಗೆ ಹೆಣೆದುಕೊಂಡಿದೆ. ಆಟ ಎಂಬ ಶಬ್ದಕ್ಕೆ ವಿನೋದ, ಹಾಸ್ಯ, ತಮಾಷೆ, ಚಟುವಟಿಕೆಯಿಂದ ಮನಬಂದಂತೆ ಓಡಾಡು, ಕುಣಿದಾಡು, ಹಾರಾಡು, ನಲಿದಾಡು, ಮುಂತಾದ ಅರ್ಥಗಳೂ ಇವೆ.[೩೭] ಆಟ ಒಂದು ಪ್ರದೇಶದ ಸಂಸ್ಕೃತಿಯೊಂದಿಗೆ ನಿಕಟವಾದ ಸಂಬಂಧವನ್ನು ಪಡೆಯುತ್ತದೆ. ಸಾವಿರಾರು ವರ್ಷಗಳ ಹಿಂದೆಯೂ ಜನಪದ ಆಟಗಳು ಪ್ರಚಲಿತದಲ್ಲಿದ್ದವು.[೩೮] ಈ ಹಿನ್ನಲೆಯಲ್ಲಿ ಭೌಗೋಳಿಕ ಪರಿಸರವನ್ನಾಧರಿಸಿ ಕೋರಾ ಪರಿಸರದ ಜನಪದ ಆಟಗಳ ಪ್ರಸ್ತಾವನೆಯನ್ನು ಇಲ್ಲಿ ಮಾಡಲಾಗಿದೆ.

### ಹೊರಾಂಗಣ ಆಟಗಳು

ಗೋಲಿ, ಬುಗುರಿ, ಈಜಾಟ, ಗೋಲಿಯಾಟ, ಕಬ್ಬಡಿ ಆಟ, ಕುಂಟ ಬಿಲ್ಲೆ, ಉಪ್ಪಾಟ, ಹುಲಿದನ ಆಟ, ಓಕುಳಿ ಆಟ, ಕಣ್ಣಾಮುಚ್ಚಾಲೆ, ಕೆರೆ–ದಡ ಆಟ, ಜಾರು ಬಂಡಿ, ಕಪ್ಪೆಯಾಟ, ಜೋಕಾಲಿ, ಮರಕೋತಿಯಾಟ, ಸರಪಣಿಯಾಟ, ಚಿನ್ನಿದಾಂಡು, ಗುಂಡು ಎಸೆತ ಆಟ, ಕಡ್ಡಿಯಾಟ, ಶಬ್ದ ಬಂಡಿಯಾಟ.

### ಒಳಾಂಗಣ ಆಟಗಳು

ಚುಕ್ಕೆಯಾಟ, ಅಡಿಗೆಯಾಟ, ಕಳ್ಳ ಪೋಲೀಸ್, ಆಣೆಕಲ್ಲಾಟ, ಚೆನ್ನಮಣೆಯಾಟ, ಹಾವಿನ ಪಟ ಆಟ, ಸರಿಬೆಸ ಆಟ, ಚದುರಂಗ, ಕೈ ಆಟ, ಹೀಗೆ ಮೇಲ್ಕಂಡ ಆಟಗಳಲ್ಲಿ ಪ್ರಮುಖವಾದವುಗಳನ್ನು ಮಾತ್ರ ಜನಪದ ಹಿನ್ನಲೆಯ ಮಹತ್ವ ದೃಷ್ಟಿಯಿಂದ ಗುರ್ತಿಸಲಾಗಿದೆ.

### ಜನಪದ ಶಿಲ್ಪಕಲೆಗಳು

ಕೋರಾ ಪರಿಸರವು ಜನಪದ ಶಿಲ್ಪಕಲೆಗಳ ತವರೂರಾಗಿದೆ. ತನ್ನ ಕಲೆಯ ರಚನೆಗೆ ಮರ, ಕಲ್ಲು ಅಥವಾ ಮಣ್ಣನ್ನಾಗಲೀ ಬಳಸಿ ಒಂದು ಆಕೃತಿಯನ್ನು ಅಥವಾ ಶಿಲ್ಪವನ್ನು ನಿರ್ಮಿಸುತ್ತಾರೆ. ಇದನ್ನು ನಿರ್ಮಿಸುವಾಗ ಸೌಂದರ್ಯ ಪ್ರಜ್ಞೆ ಮತ್ತು ಆಧ್ಯಾತ್ಮಿಕತೆಯ ಭಾವನೆಯನ್ನು ಕಲೆಯಲ್ಲಿ ರೂಪಿಸುವುದು ಒಂದು ವೈಶಿಷ್ಟ್ಯ. ಗ್ರಾಮೀಣ ಜನರು ತಮಗೆ ಅನಿಸಿದ ರೀತಿಯಲ್ಲಿ ಅಂದ–ಚಂದ ಕಂಡಂತೆ ರಚಿಸಿಕೊಂಡ ಶಿಲ್ಪಕಲೆಯೇ ಜನಪದ ಶಿಲ್ಪಕಲೆ ಪ್ರಸ್ತುತ ಕೋರಾ ಪರಿಸರದ ಗ್ರಾಮಗಳಲ್ಲಿ ಕಂಡುಬರುವ ಶಿಲ್ಪಕಲಾ ಚಿತ್ರಣದ ವಿವರಣೆಯನ್ನು ಇಲ್ಲಿ ನೀಡಲಾಗಿದೆ.

### ಮಣ್ಣಿನ ಶಿಲ್ಪಗಳು

ಗ್ರಾಮ ಸಮುದಾಯದಲ್ಲಿ ಪ್ರಾಚೀನ ಕಾಲದಿಂದಲೂ ಹಬ್ಬ ಹರಿದಿನಗಳು ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಹಬ್ಬದ ದಿನದಂದು ತಮ್ಮ ತಮ್ಮ ದೇವತೆ, ಪ್ರಾಣಿಶಿಲ್ಪಗಳನ್ನು ಮಣ್ಣಿನಲ್ಲಿ ರಚಿಸಿ, ಪೂಜಿಸಿ

ನೈವೇದ್ಯ ಮಾಡುವ ಸಂಪ್ರದಾಯ ಬೆಳೆದು ಬಂದಿದೆ. ಇಂತಹ ಹಬ್ಬಗಳಲ್ಲಿ ಒಂದಾದ ಅಮಾವಾಸ್ಯೆಯಂದು ಮಣ್ಣಿನ ಎತ್ತುಗಳನ್ನು ಮಾಡಿ ಪೂಜಿಸುವ ಪದ್ಧತಿ ಬೆಳೆದು ಬಂದಿದೆ.

**ಗುರ್ಜಿಯ ಶಿಲ್ಪ ಅಥವಾ ಮಳೆರಾಯನ ಶಿಲ್ಪ**

ಮಳೆಗಾಲದಲ್ಲಿ ವರುಣನು ಸರಿಯಾದ ಸಮಯಕ್ಕೆ ಬಾರದಿದ್ದ ಪಕ್ಷದಲ್ಲಿ ಅಥವಾ ಸಕಾಲ್ಕಕೆ ಮಳೆಯಾಗದಿದ್ದರೆ ಕಂಗಾಲಾದ ರೈತರು ಮಳೆರಾಯನಲ್ಲಿ ಮೊರೆ ಹೋಗುತ್ತಾರೆ. ಕೃಷಿಯನ್ನು ನಂಬಿದ ರೈತರು ಮಳೆಯ ಆಗಮನಕ್ಕಾಗಿ ಅನೇಕ ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಈ ರೀತಿಯ ಆಚರಣೆಗಳು ಕರ್ನಾಟಕಾದ್ಯಂತ ಪ್ರಚಲಿತವಿದೆ. ಸಾಮಾನ್ಯವಾಗಿ ಮಳೆರಾಯನ ಶಿಲ್ಪವನ್ನು ಗುರ್ಜಿ ಶಿಲ್ಪ ಎಂದು ಕರೆಯಲ್ಪಟ್ಟು ಇದನ್ನು ಮಣ್ಣಿನಿಂದ ರಚಿಸಿ ಅದರ ಮೆರವಣಿಗೆ ಮಾಡುವ ಸಂಪ್ರದಾಯ ಈ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಜೀವಂತವಾಗಿದೆ.[೩೯]

**ಶಿಲ್ಪದ ರಚನೆ**

ಸಾಮಾನ್ಯವಾಗಿ ಭಾದ್ರಪದ ಆಶ್ವೀಜ ಮಾಸಗಳಲ್ಲಿ ಮಳೆಯು ಬಾರದಿರಲು ನಮ್ಮ ಗ್ರಾಮೀಣ ಜನರು ಈ ಗುರ್ಜಿ ಶಿಲ್ಪವನ್ನು ರಚಿಸಿ ಪೂಜಿಸುವ ಸಂಪ್ರದಾಯವನ್ನು ಈ ಪ್ರದೇಶದಲ್ಲಿ ಕಾಣಬಹುದು. ಗುರ್ಜಿ ಎಂದರೆ ಮಣ್ಣನ್ನು ಹದಗೊಳಿಸಿ ಆ ಕೆಸರಿನಿಂದ ಮಾಡಲಾದ ವೀರಭದ್ರನಾಕೃತಿಯ ಶಿಲ್ಪ. ಈ ಶಿಲ್ಪದ ಮೇಲೆ ಗರಿಕೆಯ ಪತ್ರೆಯನ್ನು ಚುಚ್ಚಲಾಗುತ್ತದೆ. ಈ ಶಿಲ್ಪವೇ ಗುರ್ಜಿ ಶಿಲ್ಪ.

**ಆಚರಣೆ**

ಈ ಶಿಲ್ಪದ ಆಚರಣೆಗೆ ಯಾವುದೇ ಒಂದು ಧರ್ಮ, ಜಾತಿಯ ಭೇದಭಾವವಿಲ್ಲ. ಈ ಆಚರಣೆ ಸಂಪೂರ್ಣವಾಗಿ ಮಕ್ಕಳ ಕೇಂದ್ರೀಕೃತವಾದುದು. ಶಿಲ್ಪಕ್ಕೆ ಅರಿಶಿನ ಕುಂಕುಮವಿಟ್ಟು ಚೆಂಡು, ಕಣಗಿಲೆ, ಮಲ್ಲಿಗೆ, ಕರಿಕೆ, ದಾಸವಾಳ, ಮುಂತಾದ ಹೂಗಳಿಂದ ಅಲಂಕರಿಸಿ ಪೂಜೆ ಮಾಡುತ್ತಾರೆ. ಹಲಗೆಯ ಮೇಲೆ ಪ್ರತಿಷ್ಠಾಪಿತವಾಗಿರುವ ಈ ಶಿಲ್ಪವನ್ನು ತಲೆಯ ಮೇಲೆ ಹೊತ್ತು ಊರಿನ ಓಣಿ ಮನೆ ಮನೆಗಳಿಗೆ ತಿರುಗುತ್ತಾರೆ. ಲಂಗೋಟಿ ಮಾತ್ರ ಧರಿಸಿದ್ದು ಬರಿಮೈಯಲ್ಲಿರುತ್ತಾನೆ. ಮನೆಯ ಬಾಗಿಲಿಗೆ ಬಂದ ಗುರ್ಜಿ ಶಿಲ್ಪಕ್ಕೆ ಮನೆ ಹೆಂಗಸರು ಹೊರಬಂದು ಶಿಲ್ಪದ ಮೇಲೆ ನೀರು ಹಾಕುತ್ತಾರೆ. ಆಗ ಶಿಲ್ಪಹೊತ್ತ ಹುಡುಗ ಸುತ್ತಲೂ ನಾಲ್ಕಾರು ಸುತ್ತು ತಿರುಗುತ್ತಾನೆ. ಈ ಶಿಲ್ಪಕ್ಕೆ ನೀರು ಸುರಿಯುವಾಗ ಜನಪದ ಶೈಲಿಯ ಹಾಡು ಹಾಡುವುದು ವಾಡಿಕೆ. ಶಿಲ್ಪ ಪೂಜೆಯು ಪ್ರಾರಂಭವಾದ ೪–೫ ದಿನಗಳ ಕೊನೆಯ ದಿನ ಊಟವನ್ನು ಮಾಡಿ ಎಲ್ಲರಿಗೂ ಬಡಿಸಿ ಊರಿನ ಹೊಲಕ್ಕೆ ವಿಸರ್ಜಿಸುತ್ತಾರೆ.

**ಮಾರಮ್ಮನ ಶಿಲ್ಪ**

ಮಾರಮ್ಮ ಗ್ರಾಮದೇವತೆಗಳಲ್ಲಿ ಒಂದು. ಮಾರಮ್ಮನನ್ನು ಮಾರಿ ಎಂದೂ ಕರೆಯಲಾಗುತ್ತದೆ. ಪ್ರಸ್ತುತ ಪ್ರದೇಶದಲ್ಲಿ ಈ ದೇವತೆ ನಾಯಕ ಹಾಗೂ ದಲಿತ ಸಮುದಾಯದ ದೇವತೆಯಾಗಿದ್ದಾಳೆ. ಈ ದೇವತೆಗೆ ಮಾರಮ್ಮ, ಮರಮ್ಮ ಎಂದೂ ಕರೆಯುವರು. ಮಾರಮ್ಮ ದೇವತೆಯು ಸೃಷ್ಟಿಯಾದದ್ದು ಸಾವಿನ ಭಯದಿಂದ ಎಂದು ಜಾನಪದರ ವಾಡಿಕೆ ಇದೆ.[೪೦]

**ರಚನೆ**

ಈ ಶಿಲ್ಪಗಳ ಸ್ಥಾನಿಕ ಮತ್ತು ಆಸಿನಭಂಗಿಯಲ್ಲಿರುತ್ತವೆ. ಅರಿಶಿನ, ಕುಂಕುಮ ಹಚ್ಚಿ ಸಾಧಾರಣ ವಸ್ತ್ರ ವಿನ್ಯಾಸಗಳಿಂದ ಪ್ರತಿಷ್ಠಾಪಿಸಲಾಗಿರುತ್ತವೆ. ಉತ್ಸವಗಳ ಸಂದರ್ಭದಲ್ಲಿ ವಿಶೇಷ ವಸ್ತ್ರಾಲಂಕಾರಗಳಿಂದ ಸಿಂಗರಿಸುತ್ತಾರೆ. ಕುಂಕುಮ, ಚಂದ್ರ, ಹೂದಂಡೆ ಮತ್ತು ಜಾಜಿ ಹೂಗಳಿಂದ ಅಲಂಕರಿಸಿರುತ್ತಾರೆ. ಈ ದೇವತೆಯು ಚತುರ್ಭುಜಗಳನ್ನು ಹೊಂದಿದ್ದು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಬಟ್ಟಲು ಹಿಡಿದು ಸ್ಥಾನಿಕ ಭಂಗಿಯಲ್ಲಿರುವುದು ಈ ಶಿಲ್ಪದ ವೈಶಿಷ್ಟ್ಯತೆ.

**ಆಚರಣೆ**

ಈ ಮಾರಿದೇವತೆಯ ಪೂಜೆಯನ್ನು ಮಂಗಳವಾರ ಮತ್ತು ಶುಕ್ರವಾರ ನೆರವೇರಿಸುತ್ತಾರೆ. ಈ ಪ್ರದೇಶದಲ್ಲಿ ದಲಿತ ಅಥವಾ ನಾಯಕರು ಪೂಜಕರಾಗಿರುತ್ತಾರೆ. ವರ್ಷಕ್ಕೊಮ್ಮೆ ಉತ್ಸವ ಕಾರ್ಯಕ್ರಮ ಮೂರು, ಐದು, ಒಂಬತ್ತು ವರ್ಷಗಳಿಗೊಮ್ಮೆ ಅದ್ದೂರಿಯ ಜಾತ್ರೆಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಸಿಡಿ, ಗಾವು, ಓಕುಳಿ ಮುಂತಾದವು ಹೆಚ್ಚು ಮಹತ್ವವನ್ನು ಪಡೆದು ದೇವಿಗೆ ಅರ್ಪಿಸಿ ವಿಶೇಷ ಪೂಜೆ ಮಾಡಿ ನಂತರ ಕೋಣ, ಕುರಿ, ಮೇಕೆ ಮತ್ತು ಕೋಳಿಗಳನ್ನು ಬಲಿಕೊಡುತ್ತಾರೆ. ಈ ದೇವತೆ ಜನಪದರ ಕಣ್ಣಿಗೆ ಬಿಸಿಲುಮಾರಿ, ಗಡಿಮಾರಿ, ಊರುಮಾರಿ, ಮಕ್ಕಳ ಮಾರಿ, ದನಗಳ ಮಾರಿ ಹಾಗೂ ದಡಾರಮ್ಮಳಾಗಿ ಕಾಣಿಸಿಕೊಳ್ಳುವ ಈ ಮಾರಮ್ಮನನ್ನು ಭಯಭಕ್ತಿಯಿಂದ ಪೂಜಿಸಿ ಆಚರಿಸುತ್ತಾರೆ. ದನಕರುಗಳಿಗೆ ಕಾಲುಜ್ವರ, ಬಾಯಿಜ್ವರ, ಸಾವನ್ನು ಹೊಂದುತ್ತಿದ್ದರೆ ಊರಿನೊಳಗೆ ಜನರು ಸಾವು ನೋವು ಸಂಭವಿಸಿ ತೊಳಲಾಡುತ್ತಿರುವಾಗ ಮಾರಮ್ಮನ ವಕ್ರದೃಷ್ಟಿ ಬಿದ್ದಿದೆ ಎಂದು ತಿಳಿದು ಹಬ್ಬ ವ್ರತಾಚರಣೆ ಬಲಿ ಮತ್ತು ಹರಕೆ ಸಲ್ಲಿಸಿ ಅವಳನ್ನು ಜನರು ಶಾಂತಗೊಳಿಸುತ್ತಿದ್ದರು.

**ಜಾನಪದ ವರ್ಣ ಚಿತ್ರಕಲೆ**

ಚರ್ಮದ ಮೇಲೆ ಕಪ್ಪು ಬಣ್ಣದಿಂದ ವರ್ಣ ಚಿತ್ರ ಬಿಡಿಸಿಕೊಳ್ಳುವುದು, ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬರುತ್ತಿದೆ. ಅಣ್ಣಯ್ಯನ ತೋಟಕ್ಕೆ ೭೫ ಬೀಗ ಅತ್ತರೂ ಬರದು, ಕಿತ್ತರೂ ಬರದು" ಅಂದರೆ ಅಚ್ಚೆ. ಇದು ಶುಭದ ಸಂಕೇತದ ಕುರುಹು. ಜನಪದರ ಕಲಾಭಿರುಚಿಯ ವೈವಿಧ್ಯತೆಯನ್ನು ತೋರಿಸುವ ಸಾಧನ. ಕಾಡು ಮಾನವನಲ್ಲಿ ಹುಟ್ಟು ಪಡೆದ ಕಲೆ. ಇದು ಇಂದು ನಾಡ ಮಾನವನವರೆಗೂ ಬೆಳೆದು

ಬಂದಿದೆ. ಸೌಂದರ್ಯ ಪ್ರಜ್ಞೆಯ ಹಿನ್ನಲೆಯಲ್ಲಿ ಚರ್ಮದ ಮೇಲಿನ ಚಿತ್ರಗಳೂ ಬೆಳೆದು ಬಂದಂತಿದೆ.[೪೧] ಶಾಶ್ವತ ಚಿತ್ರಕಲೆ, ಮನುಷ್ಯ ತಾನು ಸುಖಿ ಇರಲಿ, ದುಃಖಿ ಇರಲಿ ಬದುಕಿನಲಿ ಸಿರಿತನವಿರಲಿ ಬಡತನವಿರಲಿ ಮಣ್ಣಿನ ಕಾಯ ಮಣ್ಣಾಗುವ ತನಕ ಆತನ ಮೇಲೆ ಚರ್ಮದ ಮೇಲೆ ಬಂದ ಚಿತ್ರಕಲೆಯೇ ಶಾಶ್ವತ ಚಿತ್ರಕಲೆ. ಇದು ಜನಪದರ ಒಂದು ಸಾಂಪ್ರದಾಯಿಕ ಕಲೆಯಾಗಿದ್ದು ಪಚ್ಚೆ ಎಂಬುದರ ಪ್ರತಿರೂಪವಾಗಿ ಹಚ್ಚೆ ಎಂಬ ಶಬ್ದವು ಬಂದಿರಬಹುದು. ಪಚ್ಚೆ ಎಂದರೆ ಹಸಿರು ಮಣಿ ರತ್ನ, ಹಸಿರು ಬಣ್ಣ, ಹಣೆಯ ಮೇಲಿನ ಸ್ಥಿರವಾದ ತಿಲಕ ಎಂಬ ನಾನಾರ್ಥಗಳಿವೆ.[೪೨] ಕಿಟಲ್ ಕೋಶದಲ್ಲಿ ಹಚ್ಚೆಯನ್ನು ಕುರಿತು ಅಚ್ಚೆ, ಪಚ್ಚೆ, ಹಚ್ಚೆ ಎಂಬರ್ಥಗಳಿವೆ.[೪೩] ಎಂ.ಎಂ. ಕಲಬುರ್ಗಿರವರು ದೇಹದ ಬೇರೆ ಬೇರೆ ಭಾಗಗಳ ಮೇಲೆ ಬಿಡಿಸಿಕೊಂಡ ಚಿತ್ರ ಚಿತ್ತಾರ ಮತ್ತು ಬರೆಯಿಸಿಕೊಂಡ ಅಕ್ಷರಗಳಿಗೆ 'ಹಣಚಿ' ಎಂದಿದ್ದಾರೆ. ಭಾರತದಲ್ಲಿ ಹಚ್ಚೆಯ ಪ್ರಾಚೀನತೆಯನ್ನು 'ಶುಂಗ' ಅರಸರ ಕಾಲದಲ್ಲಿ ಕಾಣಬಹುದು. ಇದಕ್ಕೆ ಕ್ರಿ.ಪೂ. ೨ನೇ ಶತಮಾನದಷ್ಟು ಹಿಂದಿನ ವಿವರವಿದೆ. ಕ್ರಿ.ಶ. ೧೪೪೪ರಲ್ಲಿ ವಿದೇಶಿ ಪ್ರವಾಸಿ ನಿಲೊಕುಂಟಿ ಮುಂತಾದ ವಿದೇಶಿ ಪ್ರವಾಸಿಗರೂ ಸಹ ಹಚ್ಚೆಯ ವಿವರಣೆಯನ್ನು ತಮ್ಮ ಬರಹದಲ್ಲಿ ತಿಳಿಸಿದ್ದಾರೆ. ರಚನೆ ಹಸಿರು ಗಿಡಮೂಲಿಕೆಗಳಿಂದ ತಯಾರಿಸಿದ ರಸ ದೇಹದ ಮೇಲೆ ಹಳದಿ ಮಿಶ್ರಿತ ಹಸಿರು ಕಲೆಯನ್ನು ಶಾಶ್ವತವಾಗಿ ಉಳಿಸಿರುವುದರಿಂದ ಈ ಚರ್ಮದ ಮೇಲಿನ ವಿನ್ಯಾಸ ಕಲೆಗೆ ಹಚ್ಚೆ, ಪಚ್ಚೆ ಎನ್ನುವ ಹೆಸರು ಬಂದಿದೆ. ಇದು ಲಂಬಾಣಿ ಸಮುದಾಯದಲ್ಲಿ ಹೆಚ್ಚಿನದಾಗಿ ಇಂದಿಗೂ ಕಾಣಬಹುದು.

**ಹಚ್ಚೆಯ ಚಿತ್ರಗಳು**

ತಾವು ನಂಬಿದ ದೇವತೆಗಳೂ, ನಾಗರಹಾವು, ಸೂರ್ಯ, ಚಂದ್ರ, ಸಿಂಹ, ಹುಲಿ, ಕಳಸ, ತಾವು ಪ್ರೀತಿಸಿದವರ ಹೆಸರು ಇತ್ಯಾದಿ ಚಿತ್ರಗಳನ್ನು ತಮ್ಮ ಕೈ, ಹಣೆ, ತೋಳಿನಲ್ಲಿ ಹಾಕಿಸಿಕೊಳ್ಳುತ್ತಿದ್ದರು.

**ಹಚ್ಚೆಯ ಸಾಮಗ್ರಿಗಳು**

ಸೂಜಿದಿಂಡು, ಕಪ್ಪಿನ ಕುಡಿಕೆ, ಚಿತ್ರ ಬರೆಯುವ ಕಡ್ಡಿ, ಹಚ್ಚೆಯ ನಕ್ಷೆ ಇರುವ ಪುಸ್ತಕ, ಬಿದಿರಿನ ಕೊಳವೆ, ಸೀಸ, ಮುಂತಾದ ಸಾಮಗ್ರಿಗಳನ್ನು ಬಳಸುತ್ತಾರೆ.

**ಹಚ್ಚೆಯನ್ನು ಕುರಿತ ನಂಬಿಕೆಗಳು**

೧. ಹಚ್ಚೆ ಇದ್ದರೆ ಮಾಡಿದ ಅಡಿಗೆ ಚೆನ್ನಾಗಿರುತ್ತದೆ.

೨. ಸತ್ತ ಮೇಲೆ ಹಚ್ಚೆ ಮಾತ್ರ ಜೊತೆಗೆ ಬರುತ್ತದೆ.

೩. ಪೂರ್ವಜರು ಹಚ್ಚೆಯ ಚಿತ್ರದ ಮೂಲಕ ಬಂದು ಕಾಪಾಡುತ್ತಾರೆ.

೪. ಮಾಟ ಮಂತ್ರ ತಗಲುವುದಿಲ್ಲ.

೫. ವಿಷ ಏರುವುದಿಲ್ಲ

೬. ಮುತ್ತೈದೆಯ ಶಾಶ್ವತ ಸಂಕೇತ

೭. ಕೆಟ್ಟ ಕನಸುಗಳು ಬೀಳುವುದಿಲ್ಲ

೮. ಹಚ್ಚೆ ಇದ್ದವರು ಮಾತ್ರ ಸ್ವರ್ಗಕ್ಕೆ ಹೋಗುತ್ಥಾರೆ

೯. ಎದೆಯ ಮೇಲೆ ಹಚ್ಚೆ ಇದ್ದರೆ ಪುಣ್ಯ ಬರುತ್ತದೆ

೧೦. ಹಚ್ಚೆ ಇದ್ದ ಹೆಣ್ಣು ಮಕ್ಕಳು ಮನೆಯ ಲಕ್ಷ್ಮಿ[೪೪]

## ನೆಲದ ಮೇಲಿನ ಚಿತ್ರಗಳು

ರಂಗೋಲಿಯು ಭಾರತದ ಅತ್ಯಂತ ಪ್ರಾಚೀನವಾದ ಜಾನಪದ ಶೈಲಿಯ ಚಿತ್ರಕಲೆಯಾಗಿದೆ. 'ರಂಗ ಬರುತ್ತಾನೆಂದು ರಂಗೋಲಿ ನಾನೊಯ್ದು ರಂಗ ಬರುತ್ತಾನೋ ಇಲ್ಲವೋ ಗೊತ್ತಿಲ್ಲ' ಎಂಬಂತೆ ರಂಗೋಲಿಯನ್ನಂತೂ ಪ್ರತಿ ಮನೆಯ ಬಾಗಿಲಿನಲ್ಲಿ ಹಾಕಿರುತ್ತಾರೆ. ಅದು ಅಲಂಕರಣದ ಕಲೆ, ಶೃಂಗಾರದ ಕಲೆ ಹಾಗೂ ಭಾರತೀಯ ಧರ್ಮ ಸಂಸ್ಕೃತಿಗಳ ತಾತ್ವಿಕ ನೆಲೆಯಾಗಿ ಕಲೆಯಾಗಿ ಬೆಳೆದುಕೊಂಡು ಬಂದಿದೆ.[೪೫] ಭಾರತೀಯ ಮಹಿಳೆಯರ ಪ್ರಮುಖ ಕಲೆಯೇ ರಂಗೋಲಿ. ಇದು ಧಾರ್ಮಿಕ ಕಲೆಯ ಮಹತ್ವವನ್ನು ಹೊಂದಿದ್ದು, ಪ್ರದೇಶಕ್ಕನುಗುಣವಾಗಿ ಜಾತಿ ಜನಾಂಗ ಭಿನ್ನತೆಗಳಿದ್ದರೂ ಉದ್ದೇಶ ಒಂದೇ. ಇದು ವರ್ಣ ರಂಜಿತ ಕಲೆಗಳಲ್ಲಿ ಒಂದಾಗಿದೆ.

ಬದುಕಿನ ಸುಖವನ್ನು, ಸೌಭಾಗ್ಯವನ್ನು, ಮಂಗಳಕರ ಪ್ರಸನ್ನತೆಯನ್ನು ಶುಭ ಸನ್ನಿವೇಶವನ್ನು ಹೇಳುವ ಲಾಲಿತ್ಯಾ ಪೂರ್ಣ ಕಲಾ ಕೌಶಲ್ಯವೇ ರಂಗವಲ್ಲಿ.[೪೬] ಕರ್ನಾಟಕದಲ್ಲಿ ರಂಗವಾಲಿ, ರಂಗವಲಿ, ರಂಗವಲ್ಲಿ, ರಂಗವಳಿ, ರಂಗಮಾಲೆ, ರಂಗಾಲೆ, ರಂಗಾ ಹಾಕುವುದು, ಮಂಡಲ ಬರೆಯುವುದು, ಶೇಡಿ ಬರೆಯುವುದು ಎಂದು ಹಲವು ಹೆಸರುಗಳಿಂದ ಕರೆಯುತ್ತಾರೆ.[೪೭] ಕಿಟೆಲ್ ಕೋಶದಲ್ಲಿ "ಆರ್ನಮೆಂಟಲ್ ಲೈನ್ಸ್ ಅಂಡ್ ಫಿಗರ್ಸ್ ಡ್ರಾನ್ ವಿತ್ ವೇರಿಯಸ್ ಆನ್‌ದ ಪ್ಲೋರ್ ದಿ ಮಟ್ಸ್ ಇನ್‌ಫ್ರಂಟ್ ಆಫ್ ದಿ ಹೌಸ್ ಆನ್‌ದಿ ಫ್ಲೋರ್ ಯಾನ್ ಐಡಲ್" ಎಂದು ಅರ್ಥೈಸಿದ್ದಾರೆ.[೪೮] ಶಿವರಾಮ ಕಾರಂತರು ಮನೆಯ ಮುಂದೆ ಬರೆಯುವ ಚಿತ್ರ ಕೆಲಸವೆಂದು ಹೇಳಿದ್ದಾರೆ.

ರಂಗವಲ್ಲಿಯ ಪ್ರಾಚೀನ ಪರಂಪರೆಯನ್ನು ಪಡೆದಿದ್ದು ರಂಗೋಲಿ ಬಿಡಿಸಲು, ಅಕ್ಕಿ ಹಿಟ್ಟನ್ನು, ಬೆಣಚುಕಲ್ಲಿನ ಪುಡಿಯನ್ನು ಬಳಸುತ್ತಾರೆ. ರಂಗೋಲಿಯು ವರ್ಣ ಚಿತ್ರವಾಗಿಸಲು ಹಲವಾರು ಸಾಮಗ್ರಿಗಳನ್ನು ಬಳಸುತ್ತಾರೆ. ಕುಂಕುಮ, ಅರಿಶಿಣ, ಸುಣ್ಣ, ಉಪ್ಪು, ಜೇಡಿಮಣ್ಣು, ಹೂಗಳು, ಧಾನ್ಯಗಳು, ವಿವಿಧ ರೀತಿಯ ವರ್ಣಗಳನ್ನು ಬಳಸುತ್ತಾರೆ.

### ರಂಗೋಲಿಯನ್ನು ಕುರಿತ ನಂಬಿಕೆಗಳು

೧. ದೇವತೆಗಳು ಸದಾ ಮನೆಯಲ್ಲಿ ವಾಸಿಸುತ್ತಾರೆ
೨. ಮನೆಯಲ್ಲಿ ಶಾಂತಿ ಸೌಹಾರ್ದತೆಗಳು ನೆಲೆಸುತ್ತವೆ
೩. ದೀಪಾವಳಿಯ ದಿನದಂದು ಬಲಿ ಚಕ್ರವರ್ತಿ ಬರುತ್ತಾನೆಂದು ನಂಬಿಕೆ ಇದೆ.
೪. ಹೊಸ್ತಿಲ ತುಂಬ ರಂಗೋಲಿ ಬರೆಯಬಾರದು ಬರೆದರೆ ಹೆಣ್ಣು ಹುಟ್ಟುತ್ತದೆ
೫. ನೀರಿನಿಂದ ರಂಗೋಲಿ ಹಾಕಿದರೆ ಕಷ್ಟ ಬರುತ್ತದೆ
೬. ಹಬ್ಬದಲ್ಲಿ ಹಾಕಿದ ರಂಗೋಲಿಯನ್ನು ಹಾಕಿ ಪುನಃ ಅಳಿಸಿ ಮತ್ತೆ ಹಾಕಬಾರದು

### ಉಡುಗೆ ತೊಡುಗೆಗಳು

ಅಲಂಕಾರ ಎಂಬುದು ಮಾನವನ ಸಹಜ ಗುಣ. ಈ ಅಲಂಕರಣವು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಿಭಿನ್ನತೆಯನ್ನು ಕಾಣುತ್ತೇವೆಯಾದರೂ ಅವುಗಳ ಉದ್ದೇಶ ಒಂದೇ ಆಗಿರುತ್ತದೆ. ಉಡುಗೆ-ತೊಡುಗೆ ಎಂದರೆ ನಾವುಗಳು ಧರಿಸುವ ಮತ್ತು ಹಾಕಿಕೊಳ್ಳುವ ವಸ್ತುಗಳೆಂದು ಗ್ರಹಿಸುವುದು ಸೂಕ್ತ.

### ಉಡುಗೆಗಳು

ದೇಹವನ್ನು ಮಳೆಗಾಳಿ ಬಿಸಿಲಿನಿಂದ ರಕ್ಷಿಸಿಕೊಳ್ಳಲು ಮಾನವ ಬಳಸುವ ವಸ್ತುಗಳೇ ಉಡುಗೆಗಳು.[೪೯] ಪ್ರಾಚೀನ ಕಾಲದಲ್ಲಿ ಮಾನವನು ಪ್ರಾಣಿಗಳ ಚರ್ಮ, ಮರದ ತೊಗಟೆ, ಎಲೆಗಳಿಂದ ಮಾಡಿದ ಹೊಂದಿಕೆ ವಸ್ತುಗಳನ್ನು ತನ್ನ ದೇಹದ ರಕ್ಷಣೆಗೆಂದು ಬಳಸುತ್ತಿದ್ದ. ಕಾಲಾನಂತರದಲ್ಲಿ ಆತನ ಉಡುಗೆ ಕ್ಷೇತ್ರದಲ್ಲಿ ಕ್ರಾಂತಿಕಾರಿ ಬದಲಾವಣೆಗಳುಂಟಾದವು. ನಂತರ ವಯಸ್ಸಿನ ಸೂತಕ, ಜಾತಿ ಸೂತಕ, ಸಮಾಜ ವ್ಯಕ್ತಿಗಳ ವೃತ್ತಿ ಸೂತಕ, ಪದವಿ ಸ್ಥಾನ ಮಾನಗಳನ್ನು ಸೂಚಿಸುವ ಮಾಧ್ಯಮಗಳಾಗಿವು. ಜನಸಾಮಾನ್ಯರು ಸಾಮಾನ್ಯವಾದ ಉಡುಪುಗಳನ್ನು ಧರಿಸುತ್ತಿದ್ದು ಶ್ರೀಮಂತರು ಬೆಲೆಬಾಳುವ ವಸ್ತ್ರಗಳನ್ನು ಧರಿಸುತ್ತಿದ್ದರು.

### ತೊಡುಗೆಗಳು

ದೇಹಕ್ಕೆ ತೊಡುವ ಅಥವಾ ಧರಿಸುವ ಆಭರಣಗಳೇ ತೊಡುಗೆಗಳು.[೫೦] ಮಾನವ ಮೂಲತಃ ಅಲಂಕಾರಪ್ರಿಯನಾಗಿದ್ದು ಹಲವಾರು ಬಗೆಯ ಆಭರಣಗಳನ್ನು ಧರಿಸುತ್ತಿದ್ದ. ಶಿಲಾಯುಗ ಸಂಸ್ಕೃತಿಯ ಕಾಲದಿಂದಲೂ ಮಾನವನು ಹಲವಾರು ಆಭರಣಗಳನ್ನು ಧರಿಸುತ್ತಿದ್ದನೆಂಬುದಕ್ಕೆ ಆಧಾರಗಳು ಲಭ್ಯವಾಗಿವೆ. 'ಶಿಪ್ಪಾಧಿಕಾರಂ' ಕೃತಿಯಲ್ಲಿ ಬಂಗಾರ, ಮುತ್ತು, ರತ್ನಾಭರಣಗಳನ್ನು ಧರಿಸುತ್ತಿದ್ದರೆಂಬುದಕ್ಕೆ ಉಲ್ಲೇಖಗಳು ದೊರೆಯುತ್ತಿವೆ. ಮಾನವನ ಬುದ್ಧಿಶಕ್ತಿ ಬೆಳೆದಂತೆ ಆತನ ಅಲಂಕಾರ ಪ್ರಜ್ಞೆಯೂ ವೃದ್ಧಿಗೊಂಡಿತು. ಅಲಂಕಾರ ವಸ್ತುಗಳು ವೈವಿಧ್ಯತೆ ಆಭರಣಗಳಲ್ಲಿ ಬದಲಾವಣೆ ಉಂಟಾಯಿತು. ಇಲ್ಲಿ ಶ್ರೀಮಂತರು ಶ್ರೀಸಾಮಾನ್ಯರು ಕೊರಳ ಸರ, ಕೈತೋಳು, ಬಂಧಿ, ಬೆರಳುಂಗುರ, ವಜ್ರದೋಲೆ, ಪದಕ, ತೋಳಬಂಧಿ, ವಜ್ರದುಂಗುರ, ಸೊಂಟಕ್ಕೆ ಡಾಬು, ಕಾಲುಂಗುರವನ್ನು ಹಾಕಿಕೊಳ್ಳುತ್ತಿದ್ದರು.

## ಹಬ್ಬಗಳು

ನಂಬಿಕೆ ಮತ್ತು ಸಂಪ್ರದಾಯಗಳೇ ಹಬ್ಬಗಳು. ಹಲವಾರು ಸಂಪ್ರದಾಯಗಳ ಮೊತ್ತವೇ ಹಬ್ಬ.[೨೯] ಹಬ್ಬಗಳು ಜಾನಪದ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಮೆರೆದಿವೆ. ಧಾರ್ಮಿಕ ಆಚರಣೆಗಳ ಜೊತೆಗೆ ಲೌಕಿಕ ಮತ್ತು ಕಲಾತ್ಮಕವಾದ ಆಚರಣೆಗಳಲ್ಲೂ ಬೆರೆತುಹೋಗಿವೆ. ಹಬ್ಬಗಳು ಆಯಾ ನಾಡಿನ ಸಂಸ್ಕೃತಿಯ ಪ್ರತೀಕವೂ ಹೌದು. ಹಬ್ಬ ಎನ್ನುವುದು ಆಚರಿಸುವವರ ಮನೋಭಾವನೆಯನ್ನು ಅವಲಂಬಿಸಿರುತ್ತದೆ. ಕೆಲವೊಮ್ಮೆ ಬಂಧುಗಳ ನೆರವಿನ ಹಬ್ಬವಾಗುತ್ತಿದೆ. ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಯೂ ಹೌದು. ಹಬ್ಬ ಎಂಬುದು ಬಾಳಿಗೆ ತಂದು ಕೊಡುವ ವಿಶೇಷವಾದ ಅಮೃತ ಬಿಂದುಗಳಾಗಿವೆ. ಮನುಷ್ಯನ ಚೇತನ ಉದಯನ್ಮುಖವಾಗಲು ಅವನ ಶೀಲ ವರ್ತನೆಗಳು ಉತ್ತಮವಾಗಲು, ಸಮಾಜದಲ್ಲಿ ಐಕ್ಯಭಾವನೆ ಬೀರಲು ನಾಡಿನಲ್ಲಿ ಶಾಂತಿ ನೆಮ್ಮದಿ ನೆಲೆಗೊಳ್ಳಲು ಈ ಹಬ್ಬಗಳು ಉತ್ರೇಕ್ಷೆಯಾಗಲಿಕ್ಕಿಲ್ಲ. ಹಬ್ಬಗಳು ಮಾನವನ ಮನಸ್ಸಿಗೆ ಆನಂದವನ್ನುಂಟುಮಾಡುವ ಸಾಧನಗಳಾಗಿವೆ.[೩೦] ಸಂಸ್ಕೃತದ ಪರ್ವನ್ ತದ್ಭವವೇ ಹಬ್ಬ. ಸಂಸ್ಕೃತದಲ್ಲಿ ಪರ್ವನ್ ಎಂದರೆ ಉತ್ಸವ ಎಂದರ್ಥ.[೩೧]

## ಯುಗಾದಿ

ಯುಗಯುಗಾದಿ ಕಳೆದರೂ ಯುಗ ಯುಗಾದಿ ಮರಳಿ ಬರುತಿದೆ ಎಂಬಂತೆ ಪಾಲ್ಗುಣ ಬಹುಳ ಅಮಾವಾಸ್ಯೆಯ ದಿನ ಹಳೆಯ ವರುಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರಶುಕ್ಲ ಪಾಡ್ಯ ಈ ವಿಜಯೋತ್ಸವದ ಪ್ರತೀಕವಾಗಿ ಯುಗಾದಿ ಪುರುಷ ಪರಾಕ್ರಮಗಳ ಪ್ರತೀಕವಾಗಿ ಆಚರಿಸುವ ಸಂಭ್ರಮವೇ ಯುಗಾದಿ ಹಬ್ಬ. ಯುಗಾದಿ ಎಂಬ ಸಂಸ್ಕೃತ ಪದದ ತದ್ಬವ ರೂಪ 'ಉಗಾದಿ'. ಸಂಸ್ಕೃತದಲ್ಲಿ ವರುಷ ಆದಿ, ಎಂದರೆ ಆರಂಭ ಎಂದರ್ಥ. ಒಟ್ಟಿನಲ್ಲಿ ವರುಷದ ಆರಂಭದ ದಿನ ಎಂದರ್ಥ. ಯುಗಾದಿ ಹಬ್ಬದ ದಿನದಂದು ಮನೆಯನ್ನೆಲ್ಲಾ ತಳಿರು ತೋರಣಗಳಿಂದ ಸಿಂಗರಿಸಿ ಪೂಜೆ ಮಾಡಿ ಊಟಕ್ಕೆ ಮೊದಲು ಬೇವು, ಬೆಲ್ಲ ತಿನ್ನುವುದು ವಾಡಿಕೆಯಾಗಿದೆ. ಸಿಹಿ ಮತ್ತು ಕಹಿ ಇವೆರಡೂ ಬದುಕಿನ ಪ್ರತೀಕ. ನೋವು ನಲಿವಿನ ಸಂಕೇತ. ಇದನ್ನೇ ಚನ್ನವೀರಕಣವಿಯವರು 'ಜೀವನವೆಲ್ಲಾ ಬೇವು ಬೆಲ್ಲ ಈ ಎರಡನ್ನೂ ಸವಿದವನೇ ಕವಿಮಲ್ಲ' ಎಂದಿದ್ದಾರೆ.[೩೨] ಯುಗಾದಿಯ ದಿನದಂದು ಅಭ್ಯಂಜನ ಸ್ನಾನ ಮಾಡಿ ದೇವರ ಪೂಜೆ ಮಾಡಿ ಗುರುಹಿರಿಯರಿಗೆ ನಮಸ್ಕಾರ ಮಾಡುವ ಪದ್ಧತಿ ಈಗಲೂ ಗ್ರಾಮಗಳ ಪ್ರಚಲಿತವಿದೆ.

## ಬನ್ನಿಹಬ್ಬ

ವಿಜಯನಗರದ ಕಾಲದಿಂದಲೂ ಆಚರಣೆಯಲ್ಲಿರುವ ಈ ಹಬ್ಬವನ್ನು ನವರಾತ್ರಿಹಬ್ಬ, ರಾಮಲೀಲಾ ಹಬ್ಬ, ದಸರಾ ಹಬ್ಬ, ವಿಜಯದಶಮಿ, ನಾಡಹಬ್ಬ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇದನ್ನು ಬಡವ ಶ್ರೀಮಂತರೆಲ್ಲರೂ ಆಚರಿಸುತ್ತಾರೆ. ಪಾಂಡವರು ವನವಾಸದ ವೇಳೆಯಲ್ಲಿ ಈ ಮರದ ಕೆಳಗೆ ವಾಸವಾಗಿದ್ದರು ಎಂಬ ಪ್ರತೀತಿಯ ಆಧಾರದ ಮೇಲೆ ಈ ಹಬ್ಬವನ್ನು ಆಚರಿಸುತ್ತಾರೆ.

## ಮಕರ ಸಂಕ್ರಾಂತಿ

ಎಳ್ಳು, ಬೆಲ್ಲವನ್ನಂಚಿ ಒಳ್ಳೆಯ ಮಾತುಗಳನ್ನಾಡು ಎಂಬ ಪ್ರತೀತಿಯಂತೆ, ನಾಡಿಗೆಲ್ಲ ಸಮೃದ್ಧಿಯನ್ನು ತರಲೆಂದು ಮಕರ ಸಂಕ್ರಾಂತಿ ಹಬ್ಬವನ್ನು ಆಚರಿಸಲಾಗುತ್ತದೆ. ಸಂಕ್ರಾಂತಿ ಎಂದರೆ ವಿಶಿಷ್ಟವಾದ ಬದಲಾವಣೆ ಹಾಗೂ ಉಜ್ವಲವಾದ ಬೆಳಕು ಎಂದರ್ಥ. ಬೆಳಕು ಎಂದರೆ ಬದಲಾವಣೆ ಎಂಬ ಅರ್ಥವನ್ನು ತರುತ್ತದೆ. ಮೂಲತಃ ಲಕ್ಷ್ಮಿಯ ಆಗಮನದ ತರುವಾಯ ಸೂರ್ಯನ ದ್ವಾದಶ ರಾಶಿಗಳಲ್ಲೊಂದಾದ ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ೬ ತಿಂಗಳ ಕಾಲ ಪ್ರಯಾಣ ಬೆಳೆಸುವನು. ಈ ಪಥ ಬದಲಿಕೆಯ ದಿನವನ್ನು ಮಕರ ಸಂಕ್ರಮಣ ಅಥವಾ ಮಕರ ಸಂಕ್ರಾಂತಿ ಎಂದು ಕರೆಯುತ್ತಾರೆ. ಈ ಕಾಲವನ್ನು ಭಾರತೀಯರು ಉತ್ತರಾಯಣ ಪುಣ್ಯಕಾಲವೆಂದು ಕರೆಯುತ್ತಾರೆ.[೫೪] ಕೋರಾ ಪರಿಸರದ ಪ್ರತಿಯೊಂದು ಗ್ರಾಮಗಳೆಲ್ಲಾ ಈ ಹಬ್ಬದ ಆಚರಣೆಯನ್ನು ತುಂಬಾ ಸಡಗರದಿಂದ ಆಚರಿಸುವುದು ರೂಢಿಯಲ್ಲಿದೆ. ಈ ಕಾಲ ಸುಗ್ಗಿಯ ಕಾಲವೂ ಹೌದು. ರೈತರ ಸುಖ ಸಂತೋಷಗಳ ಆಮೋದ ಪ್ರಮೋದಗಳ ಕಾಲವೇ ಈ ಸಂಕ್ರಾಂತಿ. ದುಡಿಮೆಯಿಂದ ಬಿಡುವಿನೆಡೆಗೆ ರೈತನ ಬದುಕು ಹೊರಳಿಸುವ ಕಾಲ ಇದಾಗಿದೆ.

## ದೀಪಾವಳಿ

ತಮಸೋಮ ಜ್ಯೋತಿರ್ಗಮಯ ಮೃತ್ಯೋರ್ಮಾ ಅಮೃತಂಗಮಯ ಎಂಬ ಉಪನಿಷತ್‌ನ ವಾಣಿಯಂತೆ ಕತ್ತಲೆಯಿಂದ ಬೆಳಕಿನೆಡೆಗೆ ಮೃತ್ಯುವಿನಿಂದ ಅಮೃತದೆಡೆಗೆ ಒಯ್ಯುವ ಬೆಳಕಿನ ಹಬ್ಬ ಇದಾಗಿದೆ.[೫೫] ಬೆಳಕೆಂಬುದು ಸಕಲಜೀವಿಗಳ ಪ್ರೇರಕ ಶಕ್ತಿ. ಬೆಳಕು ಇಲ್ಲದಿದ್ದರೆ ಪ್ರಪಂಚವೇ ಕತ್ತಲೆಯಲ್ಲಿ ತೊಳಲಾಡಬೇಕಾಗಿತ್ತು. ಈ ಬೆಳಕಿನ ಹಬ್ಬಕ್ಕೆ ದೀಪಾವಳಿ, ಹಟ್ಟಿ ಹಬ್ಬ, ದೀವಳಿಗೆ, ದೀಪಾಲಿಕಾ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಜನರು ಆಚರಿಸುವ ನಾಡಹಬ್ಬಗಳಲ್ಲಿ ಒಂದಾಗಿದೆ. 'ಉಂಡದ್ದೇ ಉಗಾದಿ ಮಿಂದದ್ದೇ ದೀಪಾವಳಿ' ಎಂಬಂತೆ ಮೈಮನವನ್ನು ಬೆಳಗಿಸಿ ಶುದ್ಧಗೊಳಿಸುವ ಸಂಭ್ರಮದ ಹಬ್ಬ ಇದಾಗಿದೆ. ಮೊದಲನೇ ದಿನ ನರಕ ಚತುರ್ದಶಿ, ಎರಡನೇ ದಿನ ದೀಪಾವಳಿ ಅಮಾವಾಸ್ಯೆ, ಮೂರನೇ ದಿನ ಬಲಿ ಪಾಡ್ಯಮಿಯಾಗಿ ಆಚರಣೆ ಮಾಡಲಾಗುತ್ತದೆ.

## ಗಣೇಶ ಚತುರ್ಥಿ

ಭಾದ್ರಪದ ಶುದ್ಧ ಚತುರ್ಥಿಯ ದಿನವೇ ಗಣೇಶ ಚತುರ್ಥಿ ಹಬ್ಬ. ಗಣೇಶ ಪೂಜೆಗೆ ಜಾತಿ ಬೇಧವಿಲ್ಲ. ಎಲ್ಲಾ ಕೋಮಿನವರೂ ಗಣಪತಿಯನ್ನು ಪೂಜಿಸುತ್ತಾರೆ. ಈ ಹಬ್ಬವನ್ನು ವಿಶೇಷವಾಗಿ ವಾರ್ಷಿಕ ಪೂಜೆ ಸಲ್ಲಿಸುವ ಹಬ್ಬ. ಮಣ್ಣಿನಿಂದ ಗಣಪತಿಯನ್ನು ರಚಿಸಿ, ಬಣ್ಣ ಬಣ್ಣಗಳಿಂದ ಅಲಂಕರಿಸಿ ಸುಂದರವಾದ ಮಂಟಪ ಕಟ್ಟಿ ವಿಶೇಷವಾದ ಪೂಜೆ ಸಲ್ಲಿಸುವ ಪದ್ಧತಿ. ಕೋರಾ ಪರಿಸರದ ಪ್ರತಿಯೊಂದು ಗ್ರಾಮಗಳಲ್ಲೂ ಕಂಡುಬರುತ್ತದೆ. ಗಣಪತಿಗೆ ಅಗ್ರಪೂಜೆ, ಗಣೇಶ ಎಂದರೆ ಗಣಗಳಿಗೆ ನಾಯಕ ಎಂದರ್ಥ.[೫೬] ಗಣೇಶ ಹಬ್ಬ

ಜನಲೋಕದ ಹಬ್ಬ, ವಿಘ್ನಗಳನ್ನು ನಾಶಮಾಡುವ ಅಧಿದೇವ ಗಣೇಶನಾದುದರಿಂದ ಕಾಯ, ವಾಚ, ಮನಸಾ, ಭಕ್ತಿಯಿಂದ ಪೂಜಿಸುವ ಪದ್ಧತಿ ಬೆಳೆದು ಬಂದಿದೆ.

**ಕಾರ ಹುಣ್ಣಿಮೆ**

ರೈತ ಕುಟುಂಬದವರು ಮಾಡುವ ವೈಶಿಷ್ಟ್ಯಪೂರ್ಣವಾದ ಆಚರಣೆ ಇದು. ಈ ಸಂಪ್ರದಾಯ ಹೆಚ್ಚಿನ ಮಟ್ಟಿಗೆ ಜೂನ್ ತಿಂಗಳ ಮಳೆಗಾಲದಲ್ಲಿ ಆಚರಿಸುವ ಆಚರಣೆ ಇದಾಗಿದೆ. ಮಳೆ ಇಲ್ಲದಿದ್ದರೆ ಬೆಳೆ ಇಲ್ಲ. ಮಳೆಯೇ ಬೆಳೆಗೆ ಮೂಲ. ಅದಕ್ಕಾಗಿ ಈ ಪರಿಸರದ ರೈತರು ಕಾರ ಹುಣ್ಣಿಮೆಯನ್ನು ಅತ್ಯಂತ ಗೌರವದಿಂದ ಆಚರಿಸುತ್ತಾರೆ. ಸಂಜೆ ಎತ್ತುಗಳ ಮೈ ತೊಳೆದು ಚಂದ್ರ, ಕುಂಕುಮ ಹಚ್ಚಿ ಪೂಜೆ ಸಲ್ಲಿಸುತ್ತಾರೆ. ಮೈಮೇಲೆ ಬಣ್ಣ ಬಣ್ಣದ ವಸ್ತುಗಳನ್ನು ಹಾಕಿ, ಸಿಂಗಾರ ಮಾಡಿ ಕೊಂಬಿನ ತುಂಬಿದೆ ಬೆಳ್ಳಿಯ ಕವಚ ಹಾಕಿ ಸಿಂಗರಿಸುತ್ತಾರೆ. ಈ ವೇಳೆಗೆ ಬೇಸಾಯದ ಸಲಕರಣೆಗಳಾದ ನೇಗಿಲು, ಕುಂಟೆ, ಈಚು, ನಗ, ಕೂರಿಗೆ, ದಿಂಡು, ಕಂಡಿಗಳು ಇತ್ಯಾದಿಗಳನ್ನು ಇಟ್ಟು ಪೂಜೆ ಮಾಡುತ್ತಾರೆ.

**ಕಣದ ಪೂಜೆ**

ಕೋರಾ ಪರಿಸರದ ಗ್ರಾಮಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಆಚರಣೆಯಾಗಿದೆ. ಕಾಳನ್ನು ವಿಂಗಡಿಸಿ ಹಸನು ಮಾಡುವ ತಾಣವಿದು. ಈ ಕಣವನ್ನು ಹಿತ್ತಲಿನ ಸಮೀಪದಲ್ಲಿ ಮಾಡುತ್ತಾರೆ. ಧಾನ್ಯವನ್ನೆಲ್ಲಾ ವಿಂಗಡಿಸಿದ ಮೇಲೆ ಕಡೆಯ ದಿನ ರಾಶಿಯನ್ನು ಪೂಜೆ ಮಾಡುತ್ತಾರೆ. ಜನಪದ ದೃಷ್ಟಿಯಿಂದ ಮೇಟಿ ಎನ್ನುವುದು ಲಕ್ಷ್ಮೀ ಎಂದರ್ಥ. ಮೇಟಿಯನ್ನು ಬನ್ನಿಮರದಿಂದಲೇ ಮಾಡಬೇಕೆಂಬ ನಿಯಮವಿದೆ. ಅಮಾವಾಸ್ಯೆಯ ದಿನ ಬನ್ನಿಮರಕ್ಕೆ ಪೂಜೆ ಮಾಡಿ ಒಂದು ತುಂಡನ್ನು ಕಡಿದು ತರುತ್ತಾರೆ. ಇದನ್ನು ಪೂಜೆ ಮಾಡಿ ಕಣದ ಮಧ್ಯದಲ್ಲಿ ನೆಡುತ್ತಾರೆ. ಕೊನೆಯ ದಿನ ರಾಶಿ ಪೂಜೆ ಮಾಡಿ ಕೂಲಿಗಾರ ಕೆಲಸದವರೆಲ್ಲರಿಗೂ ಊಟವನ್ನು ಹಾಕಿ ಸಿಹಿ ಹಂಚಿ ಭಿಕ್ಷೆ ಬೇಡಲು ಬಂದವರೆಲ್ಲರಿಗೂ ಕಾಳನ್ನು ಬುಟ್ಟಿಯಲ್ಲಿ ಕೊಡುವ ಪದ್ಧತಿ ಇದೆ.[೫೭]

**ಹೊನ್ನಾರು**

ರೈತ ಕುಟುಂಬದವರು ಮಳೆಗಾಲ ಪ್ರಾರಂಭವಾದ ಮೊದಲು ಹೊಲಕ್ಕೆ ಊಳುಮೆ ಮಾಡುವ ಪ್ರಾರಂಭಕ್ಕೆ ಹೊನ್ನಾರು ಎನ್ನುವರು. ಇಲ್ಲಿ ಮೊದಲ ದಿನ ನೇಗಿಲು ನಗಗಳನ್ನು ಮತ್ತು ಎತ್ತುಗಳನ್ನು ಮೈತೊಳೆದು ಸಿಂಗರಿಸಲಾಗುತ್ತದೆ. ಪೂಜೆಯನ್ನು ನೆರವೇರಿಸಿ ಅಕ್ಕಿಯನ್ನು ನೆನಹಾಕಿ ಅದಕ್ಕೆ ಕಾಯಿಬೆಲ್ಲ ಹಾಕಿ ಹುಡುಗರಿಗೆಲ್ಲಾ ಹಂಚಿ ನಂತರ ಉಳುಮೆಯನ್ನು ಪ್ರಾರಂಭಿಸುವುದು ಇಲ್ಲಿನ ಸಂಪ್ರದಾಯವಾಗಿದೆ.

## ಕೋರಾ ಹೋಬಳಿ ಪ್ರದೇಶದಲ್ಲಿ ಜಾತ್ರೆ, ಉತ್ಸವಗಳು

ಕೋರಾ ಪರಿಸರದ ಪ್ರತಿಯೊಂದು ಗ್ರಾಮಗಳ್ಳಲಿ ಜಾತ್ರೆ ಮತ್ತು ಉತ್ಸವಗಳು ಜನಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಜಾತ್ರೆಗಳು ಜಾನಪದ ಸಂಸ್ಕೃತಿಯ ವಿಶಿಷ್ಟ ಪ್ರಕಾರಗಳಲ್ಲಿ ಒಂದು ಜಾತ್ರೆಯನ್ನು ಪರಿಷೆ, ತೇರು, ರಥೋತ್ಸವ, ಉಭ್ಚಾಯ ಪಲ್ಲಕ್ಕಿ ಬಂಡಿ ಇತ್ಯಾದಿ ಹೆಸರುಗಳಲ್ಲಿ ಕರೆಯುತ್ತಾರೆ.[೫೮] "ಯಾನೀನ ತ್ರಾಯತ ಇತಿ ಯಾತ್ರಾ" ಅಂದರೆ ಪುಣ್ಯಕ್ಷೇತ್ರಕ್ಕೆ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆ. ಈ ಯಾತ್ರೆಯು ಸಂಸ್ಕೃತ ಪದ. ಇದರ ತದ್ಭವ ರೂಪವೇ ಜಾತ್ರೆ.[೫೯] ಜಾತ್ರೆ ಎಂಬುದು ವರ್ಷಕ್ಕೆ ನಿಗದಿಯಾದ ಇನ್ನಿತರ ಅವಧಿಗೋ ಗೊತ್ತಾದ ಒಂದು ಸ್ಥಳದಲ್ಲಿ ಒಂದು ದಿನ ಅಥವಾ ಇನ್ನೂ ಹೆಚ್ಚಿನ ದಿನಗಳಲ್ಲಿ ನಡೆಯುವ ಕಾರ್ಯಕ್ರಮವೇ ಉತ್ಸವ. ಇವುಗಳು ಧಾರ್ಮಿಕ ಸಹಿಷ್ಣುತೆಯಿಂದ ಕೂಡಿದ್ದು, ಪ್ರಸ್ತುತ ಕೋರಾದಲ್ಲಿ ನಡೆಯುವ ಪ್ರಮುಖ ಜಾತ್ರೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

### ಗೊಲ್ಲಾಳಯ್ಯನ ಜಾತ್ರೆ

ಇದು ಆಂಜನೇಯ ದೇವಾಲಯವಾಗಿದ್ದು, ೫ ದಿನಗಳು ನಡೆಯುವ ಜಾತ್ರೆ ಕಾರ್ಯಕ್ರಮವಾಗಿದೆ. ಪ್ರತಿವರ್ಷ ಫೆಬ್ರವರಿ ತಿಂಗಳ ಮೊದಲ ಪೌರ್ಣಮಿ ದಿವಸದಂದ ರಥೋತ್ಸವ ಜರುಗುತ್ತದೆ. ಗರ್ಭಗುಡಿಯಲ್ಲಿರುವವರ ಆಂಜನೇಯ ಮೂರ್ತಿಯನ್ನು ಅಲಂಕರಿಸಿ ಮೆರವಣಿಗೆಯಲ್ಲಿ ದೇವರನ್ನು ರಥಧಲ್ಲಿ ಕುಳ್ಳಿರಿಸಿ ತೇರನ್ನು ಎಳೆಯಲಾಗುತ್ತದೆ. ಊರಿನ ಸುತ್ತ ಮುತ್ತ ಗ್ರಾಮದವರೆಲ್ಲಾ ಈ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಮೂರನೇ ದಿನದಂದು ಗುಬ್ಬಿವಾನವು ವಿಶೇಷ ವಿಜೃಂಭಣೆಯಿಂದ ನೆರವೇರುತ್ತದೆ. ಇಲ್ಲಿ ಎಲ್ಲರಿಗೂ ಊಟದ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಊರಿನ ಧರ್ಮಾಧಿಕಾರಿಯು ತೇರನ್ನು ಪ್ರಪ್ರಥಮವಾಗಿ ಎಳೆದು ಚಾಲನೆ ನೀಡುತ್ತಾನೆ.

### ಶ್ರೀ ವೀರಭದ್ರೇಶ್ವರ, ಜಾತ್ರಾಮಹೋತ್ಸವ

ವೀರಭದ್ರೇಶ್ವರ ಜಾತ್ರಾ ಮಹೋತ್ಸವವನ್ನು ಮಂಡಲ ಪೂಜಾ ಉತ್ಸವವೆಂದೂ ಕರೆಯುತ್ತಾರೆ. ಇಲ್ಲಿನ ಈ ಜಾತ್ರೆಯು ಎರಡು ದಿನಗಳವರೆಗೆ ನಡೆಯುತ್ತದೆ. ಪ್ರತಿವರ್ಷ ಏಪ್ರಿಲ್ ತಿಂಗಳ ಮಂಗಳವಾರ ಅಕ್ಕಿ ಪೂಜಾ ಕಾರ್ಯಕ್ರಮವನ್ನು ನಡೆಸಲಾಗುತ್ತದೆ. ಇಡೀ ಗ್ರಾಮವನ್ನು ಹಾಗೂ ಗ್ರಾಮದಲ್ಲಿನ ಎಲ್ಲಾ ದೇವಾಲಯಗಳನ್ನು ವಿದ್ಯುತ್ ದೀಪಗಳಿಂದ ಅಲಂಕರಿಸಿ ತಳಿರು ತೋರಣಗಳಿಂದ ಸಿಂಗರಿಸಿ ರಾಜಬೀದಿಯಲ್ಲಿ ಬೃಹದಾಕಾರದ ನಾಮಫಲಕವನ್ನು ನಿರ್ಮಿಸಿರುತ್ತಾರೆ.

ವೀರಭದ್ರಸ್ವಾಮಿಗೆ ಮಹಾರುದ್ರಾಭಿಷೇಕದ ನಂತರ ತುಂಡಲ ಪೂಜಾ ಮಹೋತ್ಸವವಿರುತ್ತದೆ. ಈ ಸಂದರ್ಭದಲ್ಲಿ ಕೀಲು ಕುದುರೆ ನಾಗಸ್ವರ ವಾದ್ಯ, ಲಿಂಗದವೀರನ ಕುಣಿತ, ನಂದಿಧ್ವಜ ಕುಣಿತ, ಕತ್ತಿವರಸೆ, ಪಂಜಿನ ಮೆರವಣಿಗೆ, ಕರಡಿ ವಾದ್ಯ, ಡೊಳ್ಳುಕುಣಿತ, ಕಾರ್ಯಕ್ರಮಗಳನ್ನು ನೆರವೇರಿಸಲಾಗುತ್ತದೆ. ಹೆಣ್ಣುಮಕ್ಕಳು ಆರತಿ ಮತ್ತು ಕಳಸವನ್ನು ದೇವರಿಗೆ ಅರ್ಪಿಸತ್ತಾರೆ.

## ಲಕ್ಷ್ಮೀನರಸಿಂಹಸ್ವಾಮಿ ಜಾತ್ರೆ

ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯವು ಚಿಕ್ಕತೊಟ್ಲುಕೆರೆಯಲ್ಲಿ ಇರುವ ಪ್ರಸಿದ್ಧ ದೇವಾಲಯವಾಗಿದೆ. ಪ್ರತಿವರ್ಷ ಏಪ್ರಿಲ್ ೨೪ರಂದು ಇದರ ಬ್ರಹ್ಮರಥೋತ್ಸವವು ನಡೆಯುತ್ತದೆ. ೩ ದಿನಗಳೂ ನಡೆಯುವ ಈ ಕಾರ್ಯಕ್ರಮದಲ್ಲಿ ಸುತ್ತಮುತ್ತಲಿನ ಗ್ರಾಮಸ್ಥರೆಲ್ಲರೂ ಭಾಗವಹಿಸಿ ತೇರಿನ ಮೇಲೆ ಬಾಳೆಹಣ್ಣು ಎಳ್ಳು, ಮೆಣಸು ಮತ್ತು ಕಲ್ಲು ಸಕ್ಕರೆಯನ್ನು ಎಸೆಯುತ್ತಾರೆ. ಎಲ್ಲಾ ಧರ್ಮದವರೂ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ.

## ಚಿನಗದ ಲಕ್ಷ್ಮೀರಂಗನಾಥಸ್ವಾಮಿ ಜಾತ್ರೆ

ಈ ಪರಿಸರದಲ್ಲಿ ವಿಶೇಷತೆಯಿಂದ ಈ ಜಾತ್ರಾ ಕಾರ್ಯಕ್ರಮವು ನಡೆಯುತ್ತದೆ. ಯುಗಾದಿ ಹಬ್ಬದಿಂದ ೧೫ ದಿನಕ್ಕೆ ಪ್ರಾರಂಭವಾಗುತ್ತದೆ. ಮೊದಲ ದಿನ ಮೂಲ ನೆಲೆಯಲ್ಲಿ ಕಂಕಣ ತೊಡಿಸಿ, ನಂತರ ಲಕ್ಷ್ಮೀ ರಂಗನಾಥಸ್ವಾಮಿಗೆ ವಿವಾಹವನ್ನು ನೆರವೇರಿಸುವರು. ಹುಣ್ಣಿಮೆಯ ದಿನ ಚಿನಗದ ರಾಜಬೀದಿಯಲ್ಲಿ ಹೋಮ ಯಜ್ಞಾದಿಗಳ ಮುಖಾಂತರ ಮಧ್ಯಾಹ್ನ ೧೨ ಗಂಟೆಗೆ ಬ್ರಹ್ಮರಥೋತ್ಸವ ನಡೆಯುತ್ತದೆ. ತೇರಿನ ಮೇಲೆ ದವನ, ಬಾಳೆಹಣ್ಣು, ಚಿಲ್ಲರೆ ಹಣ ಎಸೆಯುತ್ತಾರೆ. ಭಕ್ತಾದಿಗಳಿಂದ ಅನ್ನ ಸಂತರ್ಪಣೆ ಕಾರ್ಯಕ್ರಮ ಜರುಗುವುದು. ನಂತರದ ದಿನ ದೇವರು ಬೇಟೆಗೆ ಹೋಗುವ ಕಾರ್ಯಕ್ರಮ ಜರುಗುತ್ತದೆ.ಇದರಲ್ಲಿ ಮೊಲದ ಬೇಟೆಯಾಡಿ ರಾತ್ರಿಗೆ ಸುಲಗೆ ಕಾರ್ಯಕ್ರಮವನ್ನು ಮಾಡಿ ನಂತರ ಮತ್ತೆ ಮೂಲಸ್ಥಾನಕ್ಕೆ ಹೋಗಿ ಕಂಕಣ ಬಿಚ್ಚಿಸಿಕೊಂಡು ಮತ್ತೆ ಗರ್ಭಗುಡಿಯನ್ನು ಸೇರುತ್ತದೆ.

## ಮಾವುಕೆರೆ ನಂಜುಂಡೇಶ್ವರ ಜಾತ್ರಾಮಹೋತ್ಸವ

ನಂಜುಂಡೇಶ್ವರ ಜಾತ್ರಾಮಹೋತ್ಸವವು ಕೋರಾ ಪರಿಸರದಲ್ಲೇ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಮಾವುಕೆರೆ ನಂಜುಂಡೇಶ್ವರ ಜಾತ್ರೆಯು ಪ್ರತಿವರ್ಷ ಏಪ್ರಿಲ್ ಮಾಹೆಯಲ್ಲಿ ನಡೆಯುತ್ತದೆ. ಇದು ಮೂರು ಊರು ದಿನಗಳು ನಡೆಯುತ್ತದೆ. ಮೊದಲ ದಿನದಲ್ಲಿ ದೇವರ ಪುಣ್ಯಸ್ನಾನ ಮತ್ತಿತರ ಕಾರ್ಯಕ್ರಮಗಳು ಎರಡನೇ ದಿನದಲ್ಲಿ ವಿಜೃಂಭಣೆಯಿಂದ ಬ್ರಹ್ಮರಥೋತ್ಸವ ಜರುಗುತ್ತದೆ. ಅಕ್ಕಪಕ್ಕದ ಊರಿನ ಗ್ರಾಮದವರೆಲ್ಲಾ ಇದರಲ್ಲಿ ಭಾಗವಹಿಸುತ್ತಾರೆ. ಅಂದು ಭಕ್ತಾದಿಗಳೆಲ್ಲರೂ ಬೆಲ್ಲ, ಬಾಳೆಹಣ್ಣು, ಹೂವುಗಳನ್ನು ರಥಕ್ಕೆ ಎಸೆಯುತ್ತಾರೆ. ನಂತರ ಉತ್ಸವ ಮೂರ್ತಿಯನ್ನು ತಂದು ಯಥಾಸ್ಥಾನ್ಕೆಕ ಬಿಡುತ್ತಾರೆ.

## ಜಕ್ಕೇನಹಳ್ಳಿಯ ಗುಗ್ಗರಿ ಮಾರಮ್ಮನ ಜಾತ್ರೆ

ಹೊನ್ನಾರು ಹೂಡುವುದರ ಮುಖಾಂತರ ಈ ಜಾತ್ರೆಯು ಪ್ರಾರಂಭವಾಗುತ್ತದೆ. ೩ ದಿನಗಳೂ ನಡೆಯುವ ಈ ಉತ್ಸವ ವಿಶೇಷತೆಯಿಂದ ಕೂಡಿರುತ್ತದೆ. ಎರಡನೇ ದಿನ ಚಂದ್ರಮಂಡಲ ಉತ್ಸವ

ಜರುಗುವುದು. ಮಾರಮ್ಮನಿಗೆ ಸಪ್ಪೆ ಅವರೆಕಾಳನ್ನು ಹಾಕುವುದು ಇದಕ್ಕೆ ಅತೀ ಶ್ರೇಷ್ಠವಾದುದು. ಇನೇ ದಿನ ಮಂಗಳವಾರ ದೇವತೆಗೆ ಕೋಣ, ಕುರಿ, ಮೇಕೆ ಮತ್ತು ಕೋಳಿಗಳನ್ನು ಬಲಿ ಕೊಟ್ಟು ಶಾಂತಿಗೊಳಿಸುತ್ತಾರೆ.

ಒಟ್ಟಿನಲ್ಲಿ ಪ್ರಾದೇಶಿಕ ದೃಷ್ಟಿಯಿಂದ ಈ ಜಾತ್ರೆ ಉತ್ಸವಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದರೂ ಮುಖ್ಯವಾಗಿ ಜನ ಸಮೂಹದ ಕಲ್ಯಾಣಕ್ಕಾಗಿ ಮತ್ತು ಸಾಂಸ್ಕೃತಿಕ ವಾಣಿಜ್ಯ ವಹಿವಾಟುಗಳ ಕೊಂಡುಕೊಳ್ಳುವಿಕೆಯಲ್ಲಿ ಸಾರ್ವಜನಿಕ ಸಂಭ್ರಮದಲ್ಲಿ ಸೇರುವ ವೇದಿಕೆಗಳಾಗಿವೆ. ಇಲ್ಲಿ ಎಲ್ಲ ಸಮುದಾಯದವರು ಯಾವುದೇ ಮತಧರ್ಮ, ಜಾತಿ ಜನಾಂಗದ ಬೇಧಭಾವವಿಲ್ಲದೆ ಸಂಭ್ರಮದಿಂದ ಕೂಡಿ ಆಚರಿಸುತ್ಥಾರೆ. ಇವು ಐಕ್ಯತೆಯ ಭಾವನೆಯನ್ನು ಪುಷ್ಟೀಕರಿಸಿ ಬೆಳೆಸುವ ಸಾಧನಗಳಾಗಿವೆ. ಜಾತ್ರೆ, ಉತ್ಸವ, ರಂಗಕಲೆಗಳು ಜನಪದರಿಗೆಲ್ಲಾ ಸಮಷ್ಟಿಯ ಸಂಪತ್ತಾಗಿ ಪುಣ್ಯ ಪ್ರಸಂಗದ ಪರ್ವಕಾಲವಾಗಿದೆ. ಧಾರ್ಮಿಕ ಹಿನ್ನೆಲೆಯಲ್ಲಿ ಕಂಡುಕೊಂಡ ಜಾತ್ರೆ–ಉತ್ಸವಗಳು, ಆಚರಣೆಗಳಲ್ಲಿ ಬೇಧ–ಭಾವವಿಲ್ಲದೇ ಜನರು ನೆರೆಯುವುದರಿಂದ ಈ ಎಲ್ಲಾ ಆಚರಣೆಗಳು ಸಾಮಾಜಿಕ, ಧಾರ್ಮಿಕ, ಭಾವೈಕ್ಯತೆಯ ಸಂಕೇತಗಳಾಗಿ ಪ್ರಜ್ವಲಿಸುತ್ತಲಿವೆ.

## ಅಡಿ ಟಿಪ್ಪಣಿಗಳು

೧. ಶೀಲಕಾಂತ ಪತ್ತಾರ, ೨೦೦೦ ಬಾದಾಮಿ, ಒಂದು ಸಾಂಸ್ಕೃತಿ ಅರ್ಧಯಯನ, ಪು. ೬೧

೨. ಮಹಾಲಿಂಗಂ, Econoic life Vijayanagara Empire ಪು. ೩೩

೩. ಶಿಲಾಕಾಂತ ಪತ್ತಾರ, ಬಾದಾಮಿ ಚಾಲುಕ್ಯರ ಸಾಂಸ್ಕೃತಿ ಅಧ್ಯಯನ, ೨೦೦೦, ಪು. ೬೨

೪. ಶೇಷನವರತ್ನ, (ಅನು) ಮನುಸ್ಮೃತಿ ಅಧ್ಯಾಯ, ೧, ೨೦೦೦, ಪು.೯೦

೫. ಶಿವರುದ್ರಸ್ವಾಮಿ ಎಸ್.ಎನ್., ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ೨೦೦೦ ಪು.೨೬೧.

೬. ಶೇಷರತ್ನ (ಅನು) ಮನುಸ್ಮೃತಿ ಪು.೨೦

೭. ಶ್ರೀಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ, ೧೯೮೯, ಪು.೧೯೪

೮. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೧೩೫,೧೩೯

೯. ಕಾಳಿದಾಸ ಅಭಿಜ್ಞಾನ ಶಾಕುಂತಲ, ಪು.೪೨

೧೦. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಂಸ್ಕೃತಿ ಅಧ್ಯಯನ, ಪು.೪೮

೧೧. ಪದ್ಮ ಎಂ.ವಿ., ವಿಜಸಾ., ೧೯೯೬, ಪು.೧೮

೧೨. ತುಮಕೂರು ಜಿಲ್ಲಾ ದರ್ಶನ, ಪು.೮೬

೧೩. ತುಮಕೂರು ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪು.೮೮

೧೪. ಜಿಲ್ಲಾ ಅಂಕಿ ಅಂಶಗಳ ಸಂಗ್ರಹಣಾಧಿಕಾರಿ, ತುಮಕೂರು ಜಿಲ್ಲೆ ತುಮಕೂರು. ಪು.೫೬

೧೫. ಕನ್ನಡ ಕಸ್ತೂರಿ ಕೋಶ, ಪು. ೫೧೦

೧೬. ಇಂಗ್ಲೀಷ್ ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ, ೧೯೯೯, ಪು. ೧೮೫

೧೭. ರಹಮತ್ ತರೀಕೆರೆ, ಕರ್ನಾಟಕ ಕನ್ನಡಿ ೧೯೯೯, ಪು. ೧೦೪

೧೮. ವೆಂಕಟೇಶ ಜೋಯಿಸ, ಧರ್ಮಗಳು, ೧೯೯೬, ಪು. ೬೬

೧೯. ಅದೇ ಪು. ೭೮

೨೦. ಸತೀಶ. ಕೆ., ವಿಜಯನಗರ ಕಾಲದ ಶೈವ ದೇವಾಲಯಗಳು ೨೦೦೪, ಪು. ೫೧

೨೧. ಕಡಪಟ್ಟಿ. ಎಂ.ಎನ್., ಪ್ರಾಚೀನ ಕರ್ನಾಟಕದಲ್ಲಿ ಶೈವ ಧರ್ಮ, (ಅಪ್ರಕಟಿತ ಪಿ.ಹೆಚ್.ಡಿ. ಪ್ರಬಂಧ ೨೦೦೫, ಪು. ೧೬–೧೯)

೨೨. ಡಾ॥ ಎಂ.ಚಿದಾನಂದಮೂರ್ತಿ, "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ೧೯೬೬, ಪು. ೧೮೬.

೨೩. ಭಂಡಾರಕರ್ ಆರ್. ಜಿ., ಪೂರ್ವೋಕ್ತ, ಪು. ೪೭

೨೪. Radhakrishna, Indian Philosophy, ೬, ೧೯೭೩ ಪು. ೪೯೨

೨೫. ಅಪ್ಪಣ್ಣ ಹಂಜೆ, ಪುರಾತತ್ವ ಶೋಧ, ಪು. ೨೮೧

೨೬. ಅದೇ, ಪು. ೨೮೩

೨೭. ಕೈಲಾಸ ಚಂದ್ರಸ್ವಾಮಿ, (ಅನು) ಭುಜಬಲಶಾಸ್ತ್ರಿ ಜೈನ ಧರ್ಮ, ೧೯೮೧, ಪು. ೭೫

೨೮. ತಿಪ್ಪೇರುದ್ರಸ್ವಾಮಿ.ಎಸ್., 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ,' ಪು.೫೨೩

೨೯. ಕರುಗುಂದ ಟಿ. ಪಂಕಜಾಕ್ಷಿ, ಶಿಲ್ಪ ಸೌಂದರ್ಯ, ಪು.೩

೩೦. ಅದೇ, ಪು.೩

೩೧. ದತ್ತಾತ್ರೇಯ ಜಿ. ಕುಲಕರ್ಣಿ, 'ಹಾವೇರಿ ಜಿಲ್ಲೆಯ ತ್ರಿಕೂಟ ದೇವಲಾಯಗಳು' (ಮಹಾ ಪ್ರಬಂಧ) ಪು.೨೩೦

೩೨. ಮಹಂತೇಶ್.ಎನ್.ಎಸ್., 'ಹೊಸದುರ್ಗ ಪರಿಸರದ ದೇವಾಲಯಗಳು', ಪು.೮೯

೩೩. ಕರಗುಂದ ಟೀ. ಪಂಕಜಾಕ್ಷಿ, ಪೂರ್ವೋಕ್ತ, ಪು.೩

೩೪. ಅದೇ, ಪು.೬೨೬

೩೫. ಪುರುಷೋತ್ತಮ ಬಿಳಿಮಲೆ, ಚಲುವರಾಜು, ಹಂಪಿಯ ಜಾನಪದ, ಪು.೧೪೭

೩೬. ಗಣನಾಥ ಎಕ್ಕಾರು, ತಮಿಳುನಾಡಿನ ಜಾನಪದ ಆಟಗಳು, ಪು.೨೨

೩೭. ಶಿವಾನಂದ, ಬಂಟನೂರು, ಕರ್ನಾಟಕದ ಜಾನಪದ ಶಿಲ್ಪಕಲೆ, ಪು.೫೫

೩೮. ಲಕ್ಕಪ್ಪ ಗೌಡ.ಹೆಚ್.ಜೆ., ಸುವರ್ಣ ಜಾನಪದ, ಸಂಪುಟ ೧೨, ಪು.೬೫

೩೯. ಚನ್ನಣ್ಣವಾಲೀಕರ್, ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಒಂದು ಅಧ್ಯಯನ', ಪು.೮೯

೪೦. ಖಂಡೋಬ.ಪಿ.ಕೆ, ಲಂಬಾಣಿ ಕಲೆ ಮತ್ತು ಸಂಸ್ಕೃತಿ, ಪು.೯೩

೪೧. ಕವಲಿ ಜೆ.ಎನ್., ಕನ್ನಡ ಕಸ್ತೂರಿ ಕೋಶ, ಪು.೫೬೬

೪೨. ಕಿಟಲ್.ಎಫ್.ಎ., ಕನ್ನಡ, ಇಂಗ್ಲೀಷ್ ಡಿಕ್ಷನರಿ, ಪು.೧೬೨೨

೪೩. ಪಾಟೇಲ್.ಸಿ.ಎಸ್., ಕರ್ನಾಟಕದ ಜಾನಪದ ಚಿತ್ರಕಲೆ, ಪು.೮೭-೮೮

೪೪. ಖಡೋಬ.ಪಿ.ಕೆ., ಪೂರ್ವೋಕ್ತ, ಪು.೯೪

೪೫. ತರಂಗ ವಾರಪತ್ರಿಕೆ, ಸೆಪ್ಟೆಂಬರ್ ೨೨, ಪು.೩೯

೪೬. ಪಾಟೀಲ್.ಸಿ.ಎಸ್., ಪೂರ್ವೋಕ್ತ, ಪು.ಸಂ.೨೯೨

೪೭. ಕಿಟಲ್.ಎಫ್., ಪೂರ್ವೋಕ್ತ, ಪು.೧೯೨೭

೪೮. ಶಿಲಾಕಾಂತ್ ಪತ್ತಾರ, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪು.೯೦

೪೯. ಶೀಲಾಕಾಂತ್ ಪತ್ತಾರ, ಪೂರ್ವೋಕ್ತ, ಪು.೯೮

೫೦. ಜವರೇಗೌಡ ದೇ, ಜಾನಪದ ಅಧ್ಯಯನ, ಪು.೩೬೫

೫೧. ಜೆ.ಎ.ಕವಲಿ, ಭಾರತೀಯ ಹಬ್ಬಗಳು, ಪು.೨೫

೫೨. ಹುಸೇನ್ ಬಿ.ಬಳಗೆ, ಜಾನಪದ ಸೃಷ್ಠಿ ಮತ್ತು ದೃಷ್ಠಿ, ಪು.೩೯

೫೩. ಮಂಜುನಾಥ ಬೇವಿನಕಟ್ಟಿ, ಕನ್ನಡ ಜಾನಪದ ನಂಬಿಕೆಗಳು, ಪು.೧೩೬

೫೪. ನರಸಿಂಹಮೂರ್ತಿ.ಎಸ್.ವಿ., ನಮ್ಮ ಹಬ್ಬಗಳು, ಪು.೩

೫೫. ರಾಜಶೇಖರ್.ಪಿ.ಕೆ, ಜಾನಪದ ಸಂಭ್ರಮ, ಪು.೧೦೫

೫೬. ನರಸಿಂಹಮೂರ್ತಿ.ಎಚ್.ವಿ., ಪೂರ್ವೋಕ್ತ, ಪು.೧೩೯

೫೭. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪು.೭೧

೫೮. ಚನ್ನಣ್ಣ, ಪೂರ್ವೋಕ್ತ, ಪು.೧೦೬

೫೯. ಹಿರೇಮಠ.ಎನ್., 'ಜಾತ್ರೆಗಳು', ಪು.೩೬೧

# ಅಧ್ಯಾಯ – ಆರು

## ಸಮಾರೋಪ

ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿರುವ ನಾಡು. ಇದು ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟು ಸರ್ವಧರ್ಮಗಳ ಸಮನ್ವಯತೆಯನ್ನು ಮೆರೆದ ಪವಿತ್ರ ಭೂಮಿ ಇಂತಹ ಹಿನ್ನೆಲೆಯನ್ನು ಪಡೆದಿರುವ ಕೋರಾ ಹೋಬಳಿ ಪರಿಸರವೂ ಒಂದು. ಇಲ್ಲಿ ಹಲವು ಪ್ರಾಚೀನ ನೆಲೆಗಳು, ವೀರಗಲ್ಲುಗಳು, ಶಾಸನಗಳು, ಮತ್ತು ಪ್ರಾಚೀನ ದೇವಾಲಯಗಳು ಇಂದಿಗೂ ಮೂಲ ಸಾಕ್ಷಿಗಳಾಗಿ ಅಂದಿನ ಪರಂಪರೆಯನ್ನು ಪ್ರತಿಬಿಂಬಿಸುತ್ತಿವೆ.

ಪ್ರಸ್ತುತ **"ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಪ್ರೌಢ ಪ್ರಬಂಧವು ಕೋರಾ ಪರಿಸರದ ಸಾಂಸ್ಕೃತಿಕ ಇತಿಹಾಸವನ್ನು ಕುರಿತ ಅಧ್ಯಯನವಾಗಿದೆ. ಇಲ್ಲಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯುವಲ್ಲಿ ಶಾಸನ, ದೇವಾಲಯ, ಮತ್ತು ಸ್ಮಾರಕ ಶಿಲ್ಪಗಳು ಪ್ರಮುಖ ಆಕರಗಳಾಗಿವೆ. ಒಂದು ನಾಡಿನ ಸಾಂಸ್ಕೃತಿಕ ಇತಿಹಾಸವೆಂದರೆ ಆ ನಾಡಿನ ಜನತೆಯು ಬದುಕಿದ ರೀತಿ ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಇತ್ಯಾದಿಗಳ ವಿವರಣೆಯೇ ಆಗಿದೆ. ಸಾಂಸ್ಕೃತಿಕ ಇತಿಹಾಸವೆಂಬುದು ವ್ಯಾಪಕ ವಿಶಾಲತೆಯನ್ನು ಹೊಂದಿದ್ದು ಅದು ಜನರ ಬದುಕಿನ ಸಂಪೂರ್ಣ ವಿವರಣೆಯನ್ನು ನೀಡುವುದರ ಸಂಕೇತ.

ಕೋರಾ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನದಲ್ಲಿ ಈ ಪರಿಸರದ ಚರಿತ್ರೆಯನ್ನು ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಕಟ್ಟಿಕೊಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ಈ ಮೂಲಕ ಪರಿಸರದ ಭೌಗೋಳಿಕ ಪರಿಚಯ, ಪ್ರಾತಿಹಾಸ ಕಾಲದ ನೆಲೆಗಳು, ರಾಜಕೀಯ ಹಿನ್ನೆಲೆ, ದೇವಾಲಯ ವಾಸ್ತುಶಿಲ್ಪ, ವೀರಗಲ್ಲುಗಳು, ಶಾಸನಗಳು, ಜನಜೀವನ ಕ್ರಮ ಮತ್ತು ಜಾನಪದ ವೈಶಿಷ್ಟ್ಯತೆಯನ್ನು ಕುರಿತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕದದ ಪ್ರಾಗಿತಿಹಾಸ ನೆಲೆಗಳನ್ನು ಕೋರಾ ಪರಿಸರವು ಹೊಂದಿದೆ ಈ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದ ಮಾನವನು ಜೀವಿಸಿದ್ದನು. ಇದಕ್ಕೆ ಪೂರಕವಾಗಿ ಸೂಕ್ಷ್ಮ ಶಿಲಾಯುಗದಿಂದ ಓಡಿದು ಬೃಹತ್ ಶಿಲಾಯುಗದವರಗಿನ ನೆಲೆ ಮತ್ತು ಗೋರಿಗಳು ಕಂಡು ಬಂದಿವೆ. ಇವುಗಳ ವಿವರಣಾತ್ಮಕ ವಿಷಯ ನಿರೂಪಣ ಕಾರ್ಯವನ್ನು ಮಾಡಲಾಗಿದೆ.

ಪ್ರಸ್ತುತ ಪರಿಸರದಲ್ಲಿ ಇತಿಹಾಸದ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಗಂಗರು, ರಾಷ್ಟ್ರಕೂಟರು, ಚೋಳರು, ನೊಳಂಬರು, ಹೊಯ್ಸಳರು, ವಿಜಯನಗರದ ಅರಸರು ಪಾಳೇಗಾರರು ಮತ್ತು ಮುತ್ತಿನ ಮುಮ್ಮಡಿ ನಾಡಪ್ರಭುಗಳ ಆಳ್ವಿಕೆ ಮಾಡಿದ್ದರು. ಇವರ ಆಳ್ವಿಕೆಯ ಕುರುಹುಗಳಾಗಿ ಅನೇಕ ದೇವಾಲಯಗಳು, ಶಾಸನಗಳು ಈ ಪರಿಸರದಲ್ಲಿ ನಿರ್ಮಾಣವಾಗಿವೆ. ಇವುಗಳ ಅಧ್ಯಯನದ ಮೂಲಕ ಇಲ್ಲಿನ ರಾಜಕೀಯ ಚರಿತ್ರೆಯನ್ನು ವಿವರಣಾತ್ಮಕವಾಗಿ ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ.

ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳಲ್ಲಿ ಚೋಳರು ಮತ್ತು ವಿಜಯನಗರದ ಅರಸರು ಪ್ರಮುಖರು. ಇದೆಲ್ಲ ಸಾಕ್ಷಿಗಳಂತೆ ಹಲವು ದೇವಾಲಯ ನಿರ್ಮಿಸುವುದನ್ನು ಕಾಣಬಹುದು. ಅವುಗಳ ರಚನೆ ವಾಸ್ತುಶಿಲ್ಪ ನಿರ್ಮಾಣದ ವೈಶಿಷ್ಟ್ಯತೆಗಳ ಸೂಕ್ಷ್ಮವಿಷಯಗಳನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇವುಗಳಲ್ಲಿ ಶೈವದೇವಾಲಯಗಳು ಅಧಿಕವಾಗಿದ್ದು, ಈ ಪರಿಸರದಲ್ಲಿ ಶೈವಾರಾಧನೆ ಪ್ರಚಲಿತದಲ್ಲಿರುವುದು ಸ್ಪಷ್ಟವಾಗಿತ್ತದೆ. ಇದರ ಜೊತೆಗೆ ವೈಷ್ಣವ, ಮತ್ತು ಶಾಕ್ತ ಪಂಥದ ದೇವಾಲಯಗಳು ಕಂಡು ಬಂದಿರುವುದು ಗಮನಾರ್ಹ. ದೇವಾಲಯದ ಕಂಬಗಳ ಕೆತ್ತನೆ, ರಚನಾ ವಿನ್ಯಾಸವು ವಿಶಿಷ್ಟ್ಯತೆಯಿಂದ ಕೂಡಿದವುಗಳಾಗಿವೆ. ಪಾಳೇಗಾರರ ಕಾಲದ ದೇವಾಲಯಗಳು ಚಚ್ಚೌಕಾಕಾರವಾಗಿದ್ದು ವಾಸ್ತು ಶೈಲಿಯಲ್ಲಿ ವಿಶೇಷತೆಯನ್ನು ಹೊಂದಿವೆ.

ಶೈವಧರ್ಮವು ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಮತ್ತು ಪಾಳೇಗಾರರಿಂದ ಪೋಷಿಸಲ್ಪಟ್ಟಿತು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕೋರಾ ಶೈವಧರ್ಮದ ಪ್ರಮುಖ ಕೇಂದ್ರವಾಗಿತ್ತು. ಶೈವಧರ್ಮದ ಅನೇಕ ದೇವಾಲಯಗಳು ಮಠಗಳು, ಗದ್ದಿಗೆಗಳು ಸ್ಥಾಪನೆಯಾದವು ಎಂಬುದು ಗಮನಾರ್ಹ ಸಂಗತಿ. ಹಿರೇತೊಟ್ಲುಕೆರೆಯಲ್ಲಿರುವ ರಾಮೇಶ್ವರ ದೇವಾಲಯವು ವೈಷ್ಣವ ಧರ್ಮದ ಧಾರ್ಮಿಕತೆಗೆ ಹಿಡಿದ ಕೈಗನ್ನಡಿ. ದೇವಲಾಪುರದಲ್ಲಿ ದೊರೆತಿರುವ ವೈಷ್ಣವ ಮೂರ್ತಿಶಿಲ್ಪವು ಈ ಧರ್ಮದ ನೆಲೆಸುವಿಕೆಯಲ್ಲಿನ ಪ್ರತಿಬಿಂಬವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಲಭ್ಯ ಆಧಾರಗಳಿಂದ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಜೀವನದ ವೈಶಿಷ್ಟ್ಯತೆಯನ್ನು ಕಟ್ಟಿಕೊಡಲಾಗಿದೆ ಜೊತೆಗೆ ಅಂದು ರೂಢಿಯಲ್ಲಿದ್ದ ಕೃಷಿ ಪದ್ಧತಿ ಗ್ರಾಮಗಳ ಆಡಳಿತ ಆಗ್ರಹಾರಗಳ ಪ್ರಮುಖ ಕಾರ್ಯಗಳ ಬಗ್ಗೆ ಸ್ಪಷ್ಟಪಡಿಸಲಾಗಿದೆ. ಅಗ್ರಹಾರಗಳು

ಅಂದಿನ ಸಾಮಾಜಿಕ ಜೀವನದಲ್ಲಿ ಪ್ರಭುತ್ವವನ್ನು ಪಡೆದಿದ್ದವು ಎಂಬುದು ನಿರ್ವಿದ. ಪ್ರಾಚೀನ ಕಾಲದಿಂದಲೂ ಧಾರ್ಮಿಕ ಸಹಿಷ್ಣತೆಯನ್ನು ಉಳಿಸಿಕೊಂಡು ಬಂದಿರುವ ಶೈವ ಮತ್ತು ವೈಷ್ಣವ, ಜೈನ ಮತ್ತು ಇಸ್ಲಾಂ ಧರ್ಮಗಳು ಸಹಕಾರಿಯಾಗಿದ್ದವು. ಇದಕ್ಕೆ ಸ್ಫೂರ್ತಿಯಾಗಿ ನಿಷಿಧಿಗಲ್ಲುಗಳು ಸಮಾಧಿ ಗೋರಿಗಳ ಆಚರಣೆಗಳು ಇಂದಿಗೂ ರೂಢಿಯಲ್ಲಿವೆ.

ಜಾನಪದ ಎಂಬುದು ಮಾನವನ ಜೀವ ಶೈಲಿಯಾಗಿದೆ. ಮೂರ್ತಿಶಿಲ್ಪಗಳು ದೇವಾಲಯದಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿವೆ. ಇವು ದೇವಾಲಯದ ಅವಿಭಾಜ್ಯ ಅಂಗಗಳಾಗಿದ್ದು ಜನರ ನಂಬಿಕೆ ಮತ್ತು ಆಚರಣೆಗಳ ಪ್ರತೀಕಗಳಾಗಿದ್ದವು. ಈ ಪರಿಸರದಲ್ಲಿ ಅನೇಕ ಬಗೆಯ ಮೂರ್ತಿ ಶಿಲ್ಪಗಳು ದೊರೆಯುತ್ತಿದ್ದು ಅದರಲ್ಲಿ ಉಬ್ಬು ಶಿಲ್ಪಗಳೇ ಅಧಿಕವಾಗಿವೆ. ಇವು ಶೌರ್ಯ ಮತ್ತು ಪ್ರತಿಷ್ಠೆ ಹೆಸರುವಾಸಿಯಾಗಿವೆ. ಇಲ್ಲಿನ ಅನೇಕ ಮೂರ್ತಿ ಶಿಲ್ಪಗಳು ಧರ್ಮಮತಾಚರಣೆಗಳ ಮೇಲೆ ಬೆಳಕು ಚಲ್ಲುತ್ತದೆ. ಉದಾಹರಣೆಗೆ ದೇವಲಾಪುರದಲ್ಲಿ ದೊರೆತಿರುವ ವೈಷ್ಣವ ಶಿಲ್ಪವು ವೈಷ್ಣಪಂಥಾಚರಣೆಯ ಮೇಲೆ ಬೆಳಕು ಚಲ್ಲುತ್ತದೆ. ಇವುಗಳ ರಚನೆಯಲ್ಲಿ ಹಂತ ಹಂತವಾಗಿ ಉಂಟಾದ ಬದಲಾವಣೆಗಳನ್ನು ತಿಳಿಸುತ್ತವೆ.

ಪ್ರಸ್ತುತ ಪರಿಸರದಲ್ಲಿ ಸಂಸ್ಕೃತಿ ಬೆಳೆದಂತೆ ಐಕ್ಯತೆಯಲ್ಲಿ ಪ್ರಮುಖ ಸ್ಥಾನಪಡೆದವು. ಈ ನಿಟ್ಟಿನಲ್ಲಿ ವೀರಗಲ್ಲು, ಮಾಸ್ತಿಗಲ್ಲು ಮತ್ತು ನಿಷಿಧಿಗಲ್ಲುಗಳು ಲಭ್ಯವಾಗಿದ್ದು ಅವುಗಳ ಸಂಕ್ಷೇಪ್ತ ವಿವರಣೆಯನ್ನು ನೀಡಲಾಗಿದೆ. ಈ ಸ್ಮಾರಕ ಶಿಲ್ಪಗಳು ಅಂದಿನ ಸಾಮಾಜಿಕ ಜೀವನದ ಸಂಪೂರ್ಣ ಚಿತ್ರಣವನ್ನು ಪ್ರತಿನಿಧಿಸುತ್ತವೆ. ಅವುಗಳಿಂದ ಧಾರ್ಮಿಕ ನೆಲೆಗಟ್ಟಿನ ಚಿತ್ರಣ ವೀರತ್ವದ ಪ್ರತಿಬಿಂಬ ಹಾಗೂ ಸ್ತ್ರೀಯರ ಹೋರಾಟದ ಮನೋಭಾವದ ಗುಣಗಳನ್ನು ತಿಳಿಯಬಹುದು. ಒಟ್ಟಿನಲ್ಲಿ ಇವುಗಳು ಅಂದಿನ ಸಾಮಾಜಿಕ ಜೀವನದ ಪ್ರತ್ಯಕ್ಷ ಸಾಕ್ಷಿಗಳಂತೆ ಪ್ರತಿಬಿಂಬಿತವಾಗುತ್ತವೆ.

ಕೋರಾ ಪ್ರದೇಶದಲ್ಲಿ ಜೀವನ ಶೈಲಿಯ ಸಂಸ್ಕೃತಿ ಬದಲಾವಣೆಯೊಂದಿಗೆ ಅನೇಕ ಪಂಥಾಚರಣೆಗಳು ಇಲ್ಲಿ ಜನ್ಮ ಪಡೆದವು. ಈ ಪಂಥಗಳು ತಮ್ಮ ನೆಲೆಯಲ್ಲಿ ಪ್ರಭುತ್ವ ಅಧಿಕಾರವನ್ನು ನಿರ್ಧರಿಸುವ ಕೇಂದ್ರ ಬಿಂದುಗಳಾಗಿದ್ದವು. ಇಲ್ಲಿ ಶೈವ, ವೈಷ್ಣವ ಮತ್ತು ಜೈನ ಪಂಥಗಳ ಅಸ್ತಿತ್ವದಲ್ಲಿದ್ದವು. ಪ್ರಸ್ತುತ ವಿಷಯಕ್ಕೆ ಸಂಬಂಧಪಟ್ಟಂತೆ ಅಧ್ಯಯನ ಕೈಗೊಂಡಾಗ ನೂತನ ಸಂಗತಿಗಳು ಬೆಳಕಿಗೆ ಬಂದವು. ಇಲ್ಲಿರುವ ವಿರಳವಾದ ಹಾಸಗಳು ದೇವಾಲಯಗಳು ಮೂರ್ತಿಶಿಲ್ಪಗಳು ಮತ್ತು

ವೀರಗಲ್ಲುಗಳನ್ನೂ ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಯಿತು. ಇಲ್ಲಿ ದೊರೆತ ಪ್ರತಿಯೊಂದ ಆಕರಗಳನ್ನೂ ಪರಿಶೀಲಿಸಿ ಒಂದು ಸ್ಪಷ್ಟ ಇತಿಹಾಸವನ್ನು ಕಟ್ಟಿಕೊಡಲಾಗಿದೆ.

ಒಂದು ಅಧ್ಯಯನವೆಂಬುದು ನಿಂತನೀರಾಗಬಾರದು. ಅದು ಸದಾ ಹೊಸದನ್ನು ಹುಡುಕುವ ಸಂಶೋಧಕರಿಗೆ ದಾರಿ ದೀಪವಾಗಬೇಕು. ಈ ಅಧ್ಯಯನವ್ಯಾಪ್ತಿಯ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಹೆಚ್ಚಿನ ಕಾರ್ಯ ನಡೆದಿದೆ. ಆದ್ದರಿಂದ ಪ್ರಾಗಿತಿಹಾಸದ ನೆಲೆಗಳನ್ನು ಮತ್ತೆ ಸಂಶೋಧಿಸಿದರೆ ಹೊಸ ಮಹತ್ವದ ಸಂಗತಿಗಳು ದೊರೆಯಬಹುದು. ದೇವಾಲಯದ ವಾಸ್ತುಶಿಲ್ಪ, ಮೂರ್ತಿಶಿಲ್ಪ ಮತ್ತು ಶಾಸನಗಳ ಮತ್ತಷ್ಟು ದೀರ್ಘ ಅಧ್ಯಯನದ ಮೂಲಕ ಪ್ರಸ್ತುತ ಪರಿಸರದ ಇತಿಹಾಸದ ಪುಟಗಳಿಗೆ ಹೊಸ ವಿಷಯಗಳನ್ನು ಸೇರ್ಪಡೆ ಮಾಡಬಹುದು.

ಈ ಪರಿಸರವು ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದು ಸವಿವರವಾಗಿ ಚಿತ್ರಿಸಲು ಪ್ರಯತ್ನಿಸಲಾಗಿದೆ. ಆದರೆ ಇದೊಂದು ದೀರ್ಘ ಸಂಶೋಧನಾ ಪ್ರೌಢ ಪ್ರಬಂಧವಾಗಿರುವುದರಿಂದ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಆಳವಾದ ಸಂಶೋಧನೆಗಳು ಆಗಬೇಕಾಗಿದೆ. ಈ ಪರಿಸರದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಲು ಮೂಲ ಆಕರಗಳಾದ ಶಾಸನಗಳ ಕ್ರೂಢೀಕರಣ ಇಲ್ಲದೇ ಇರುವುದು ಆದ್ದರಿಂದ ಈ ನಿಟ್ಟಿನಲ್ಲಿ ಆದಷ್ಟು ತೀವ್ರತರವಾಗಿ ಹೆಚ್ಚಿನ ಸಂಶೋಧನಾ ಕಾರ್ಯಗಳು ನಡೆಯಬೇಕಾಗಿದೆ.

# ಗ್ರಂಥಋಣ


| | | |
|---|---|---|
| ಅಪರ್ಣ ಕೂ.ಸ. | ೧೯೯೯ | ***ದೇವಾಲಯ ವಾಸ್ತು ಶಿಲ್ಪ.*** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ |
| ಬಿ.ಎಂ. ಚಂದ್ರಶೇಖರಯ್ಯ | ೨೦೦೫ | ***ಕರ್ನಾಟಕ ಸಾಂಸ್ಕೃತಿಕ ಪರಂಪರೆ,*** ನಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು. |
| ಚಿದಾನಂದ ಮೂರ್ತಿ. ಎಂ. | ೧೯೭೯ | ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಮೈಸೂರು ವಿಶ್ವವಿದ್ಯಾಲಯ, ಮೈಸೂರು. |
| ಚಂದ್ರಶೇಖರ ನಾರಾಣಾಪುರ | ೨೦೦೨ | ***ಕರ್ನಾಟಕದಲ್ಲಿ ವೀರಶೈವ ಮಠಗಳು*** ಮುಂದತ್ವ ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು. |
| ಚಿದಾನಂದ ಮೂರ್ತಿ. ಎಂ. | ೧೯೮೪ | ***ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು,*** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |
| ಸಿ.ಎನ್. ಭಾಸ್ಕರಪ್ಪ | ೨೦೦೬–೨೦೦೭ | ***ತುಮಕೂರು ಜಿಲ್ಲಾ ದರ್ಶನ,*** ತುಮಕೂರು |
| ಚೆನ್ನಕ್ಕ ಪಾವಟೆ | ೧೯೯೫ | ಮಾಸ್ತಿಕಲ್ಲು, ಪ್ರಾಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ದಾಸೇಗೌಡ | ೧೯೭೩ | ***ನಮ್ಮ ಜಾನಪದ ನಂಬಿಕೆಗಳು*** ಮೈಸೂರು ವಿಶ್ವವಿದ್ಯಾಲಯ, ಮೈಸೂರು. |
| ಡಿ.ವಿ. ಪರಮ ಶಿವಮೂರ್ತಿ | ೧೯೯೯ | ***ಕನ್ನಡ ಶಾಸನ ಶಿಲ್ಪ,*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಪ್ರಿಂಟರ್ಸ್, ಬೆಂಗಳೂರು. |
| ದೇವರ ಕೊಂಡಾರೆಡ್ಡಿ | ೧೯೯೬ | ***ಗಂಗರ ದೇವಾಲಯಗಳು ಒಂದು ಅಧ್ಯಯನ,*** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. |
| ದಿವಾಕರ ಆರ್.ಆರ್. | ೧೯೮೩ | ***ಕರ್ನಾಟಕ ಪರಂಪರೆ*** ಸಂ.೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು |
| ಜ್ಞಾನಾನಂದ. ಜಿ. | ೨೦೦೧ | ***ಶಿಲ್ಪದರ್ಶನ*** ಸಂಪುಟ–೧, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. |
| ಗೋಪಾಲ. ಬಾರಾ. | ೧೯೭೧ | ***ಕರ್ನಾಟಕದಲ್ಲಿ ನವಶಿಲಾಯುಗ,*** ಕನ್ನಡ ವಿಶ್ವವಿದ್ಯಾಲಯ, ಧಾರವಾಡ. |
| ಗೋಪಾಲ ಬಾರಾ. | ೧೯೮೫ | ***ಕರ್ನಾಟಕದ ಮೂರ್ತಿ ಶಿಲ್ಪ ಅವಲೋಕನ*** (ಕರ್ನಾಟಕದ ಪರಂಪರೆ ಸಮೀಕ್ಷೆ) ಬೆಂಗಳೂರು. |

| | | |
|---|---|---|
| ಗೋಪಾಲ ಬಾರಾ. | ೧೯೯೬ | ***ಕರ್ನಾಟಕದ ಕಲೆಗಳು*** ಸಂಪುಟ-೮, ಸಂಪುಟ-೧೧, ಬೆಂಗಳೂರು. |
| ಗುರುರಾಜ್ ರಾವ್. ಎ.ಕೆ. | ೧೯೯೪ | ***ಕರ್ನಾಟಕ ವಾಸ್ತುಶಿಲ್ಪಗಳು,*** ಕರ್ನಾಟಕ ಇತಿಹಾಸ ಅಕಡೆಮಿ, ಮೈಸೂರು. |
| ಕರ್ನಾಟಕ ಇತಿಹಾಸ ಅಕಾಡೆಮಿ | ೨೦೦೦ | ***ಇತಿಹಾಸ ದರ್ಶನ,*** ಸಂಪುಟ – ೧೫, ಬೆಂಗಳೂರು. |
| ಹಿರೇಮಠ್. ಎಸ್. ಎಂ. | ೧೯೭೬ | ***ವೀರಗಲ್ಲುಗಳು*** ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ. |
| ಹಿರೇ ಮಲ್ಲೂರ್ ಈಶ್ವರನ್ | ೧೯೯೮ | ***ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ.*** ಮೈಸೂರು ವಿಶ್ವ ವಿದ್ಯಾಲಯ, ಬೆಂಗಳೂರು. |
| ಜವರೇಗೌಡ. ದೇ. | ೨೦೦೧ | ***ಜಾನಪದ ಅಧ್ಯಯನ,*** ಚೇತನ್ ಬುಕ್ ಹೌಸ್, ನಾರಾಯಣ ಶಾಸ್ತ್ರಿ ರಸ್ತೆ, ಮೈಸೂರು. |
| ಜೋಶಿ. ಡಿ..ಬಿ. | ೧೯೮೮ | ***ಪ್ರಾಚೀನ ಭಾರತದ ಇತಿಹಾಸ,*** ವಿದ್ಯಾನಿಧಿ ಪ್ರಕಾಶನ, ಗದಗ. |
| ಕರ್ನಾಟಕ ಕೈಪಿಡಿ | ೧೯೯೯ | ***ಕರ್ನಾಟಕ ಗ್ಯಾಜೆಟಿಯರ್ ಇಲಾಖೆ,*** ಕರ್ನಾಟಕ ಸರ್ಕಾರ. |
| ಕಲುಬುರ್ಗಿ. ಎಂ.ಎಂ. | ೧೯೮೦ | ***ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು,*** ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು. |
| ಕಡಪಟ್ಟಿ . ಎಂ.ಎನ್. | ೨೦೦೫ | ***ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ*** (ಅ.ಐ.ಎ.ಪಿ.ಡಿ. ಮಹಾ ಪ್ರಬಂಧ) ಧಾರವಾಡ. |
| ಕೆ.ಆರ್. ಬಸವರಾಜು | ೨೦೦೫ | ***ನೊಳಂಬರ ಇತಿಹಾಸ ದರ್ಶನ,*** ಲಕ್ಮೀ ಮುದ್ರಣಾಲಯ, ಮೈಸೂರು. |
| ಕೃಷ್ಣ. ಎಂ. ಹೆಚ್. | ೧೯೫೯ | ***ಕರ್ನಾಟಕದ ಪೂರ್ವ ಚರಿತ್ರೆ,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಕೃಷ್ಣಶರ್ಮ ಬೆಟಗೇರಿ | ೧೯೬೩ | ***ಕರ್ನಾಟಕ ಜನ ಜೀವನ,*** ಜಯಂತಿ ಕಾರ್ಯಾಲಯ, ಧಾರವಾಡ. |
| ಕೃಷ್ಣಮೂರ್ತಿ. ಸಿ.ಡಿ. | ೧೯೬೨ | ***ಭಾರತೀಯ ಸಂಸ್ಕೃತಿ ದರ್ಶನ,*** ಸುರಭಿ ಪ್ರಕಾಶನ, ಮೈಸೂರು. |
| ಮುಗಳಿ ರಂ. ಶ್ರೀ | ೧೯೭೬ | ***ಕರ್ನಾಟಕ ಸಾಂಸ್ಕೃತಿಕ ಪರಂಪರೆ,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |

| | | |
|---|---|---|
| ಮುದ್ದೇನಹಳ್ಳಿ ನಂಜಯ್ಯ | | ***ಹೊನ್ನಾರು ಸ್ಮರಣ ಸಂಚಿಕೆ***, ಕೋರಾ ಹೋಬಳಿ, ಕನ್ನಡ ಸಾಹಿತ್ಯ ಪರಿಷತ್, ತುಮಕೂರು. |
| ನರಸಿಂಹ ಮೂರ್ತಿ. ಹೆಚ್..ಪಿ. | ೨೦೦೨ | ***ನಮ್ಮ ಹಬ್ಬಗಳು***, ವಿಕಾಸನ ಪ್ರಕಾಶನ, ನರೆಂಬಳ್ಳಿ ರಸ್ತೆ, ಉಡುಪಿ ಜಿಲ್ಲೆ. |
| ನಾಗರಾಜಯ್ಯ. ಹಂ. ಪಾ. | ೧೯೮೫ | ***ಕರ್ನಾಟಕದ ಚರಿತ್ರೆಗಳು***, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. |
| ನಾಯಕ. ಹಾ.ಮಾ. | ೧೯೭೧ | ***ಜಾನಪದ ಸ್ವರೂಪ***, ಮೈಸೂರು. |
| ನಂದಿಮಠ. ಎಸ್. ವಿ. | ೧೯೮೩ | ***ಕರ್ನಾಟಕ ಧರ್ಮಗಳು***, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |
| ಪಾಡಿಗಾರ ಶ್ರೀನಿವಾಸ್ | ೧೯೮೯ | ***ಬಾದಾಮಿ ಮತ್ತು ವೈಷ್ಣವ ಧರ್ಮ***, ಕರ್ನಾಟಕ ಭಾರತಿ, ಸಂ.೩ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಪ್ರಭಾಕರ. ಎಂ. ಎಸ್. | ೨೦೦೦ | ***ದೇವಾಲಯ ವಾಸ್ತು ಚಂದ್ರಿಕೆ***, ಪ್ರಸಾರಂಗ ಕನ್ನಡ ವಿ.ವಿ. ಹಂಪಿ. ವಿದ್ಯಾರಣ್ಯ. |
| ರಮೇಶ್. ಕೆ.ಪಿ. | ೧೯೭೧ | ***ಕರ್ನಾಟಕ ಶಾಸನ ಸಮೀಕ್ಷೆ*** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |
| ರಘುನಾಥ್ ಭಟ್. ಹೆಚ್. ಆರ್. | | ***ಕರ್ನಾಟಕ ಶಾಸನ ಕಲೆ*** ಭಾರತ ಪ್ರಕಾಶನ, ಮೈಸೂರು. |
| ರಾಮಚಂದ್ರ ರಾವ್. ಎಸ್. ಕೆ. | ೧೯೭೫ | ***ಮೂರ್ತಿಶಿಲ್ಪ ನೆಲೆ ಹಿನ್ನೆಲೆ*** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |
| ರಾಮಚಂದ್ರ ರಾವ್. ಎಸ್. ಕೆ. | ೧೯೭೮ | ***ಕರ್ನಾಟಕ ಕಲೆ ಮತ್ತು ವಾಸ್ತು ಶಿಲ್ಪ***, ಸಂ.೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಆರ್. ಗೋಪಾಲ್ | ೨೦೦೯ | ***ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ***, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಸಾಲತೊರೆ. ಬಿ. ಎಂ. | ೧೯೫೩ | ***ಕನ್ನಡ ನಾಡಿನ ಚರಿತ್ರೆ***, ಭಾಗ-೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |

| | | |
|---|---|---|
| ಸುಂದರ್. ಅ. | | ***ದೇವಾಲಯ ಮೂರ್ತಿಶಿಲ್ಪಗಳ, ಒಂದು ವಿಶ್ಲೇಷಣೆ,*** ದಯಾನಂದ ಪೈ ಇತಿಹಾಸನ ಸಂಶೋಧನ ಕೇಂದ್ರ, ಮೈಸೂರು. |
| ಸೂರ್ಯನಾಥ ಕಾಮತ್ | ೨೦೦೦ | ***ಇತಿಹಾಸ ದರ್ಶನ,*** ಕರ್ನಾಟಕ ಇತಿಹಾಸ ಅಕಾಡೆಮಿ, ಬೆಳಗಾವಿ. |
| ಶೇಷ ಶಾಸ್ತ್ರಿ. ಆರ್. | ೧೯೮೨ | ***ಕರ್ನಾಟಕದ ವೀರಗಲ್ಲುಗಳು,*** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. |
| ಶಿವರಾಮ ಕಾರಂತ. ಕೆ. | ೧೯೬೯ | ***ಚಾಲುಕ್ಯ ವಾಸ್ತುಶಿಲ್ಪ,*** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. |
| ಶಿವರಾಮ ಕಾರಂತ. ಕೆ. | ೧೯೬೯ | ***ಕರ್ನಾಟಕದಲ್ಲಿ ಶಿಲ್ಪಗಳು,*** ಡಿ.ಬಿ.ಹೆಚ್. ಪ್ರಕಾಶನ, ಬೆಂಗಳೂರು. |
| ಷೇಕ್ ಅಲಿ ಮತ್ತು ಅಸುಂದರ | ೧೯೯೭ | ***ಕರ್ನಾಟಕ ಚರಿತ್ರೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ. ಬಳ್ಳಾರಿ. |
| ಸೂರ್ಯನಾಥ ಕಾಮತ್ (ಪ್ರ.ಸಂ) | ೧೯೮೪ | ***ಕರ್ನಾಟಕ ರಾಜ್ಯ ಗ್ಯಾಜಿಟಿಯರ್,*** ಕರ್ನಾಟಕ ಸರ್ಕಾರ, ಬೆಂಗಳೂರು. |
| ಸುಂದರ . ಅ. (ಸಂ) | ೧೯೯೭ | ***ಕರ್ನಾಟಕ ಚರಿತ್ರೆ,*** ಸಂಪುಟ–೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. |
| ಸಿಂದಗಿ ರಾಜಶೇಖರ | ೧೯೮೮ | ***ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ |
| ಸುರೇಂದ್ರ ರಾವ್ . ಬಿ. | ೧೯೯೭ | ***ಕರ್ನಾಟಕ ಚರಿತ್ರೆ*** ಸಂಪುಟ ೩, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ |
| ಶಿವಕುಮಾರ ಸ್ವಾಮಿ.ಸಿ.ಎಸ್. | ೧೯೮೮ | ***ಕರ್ನಾಟಕದ ಜಾತ್ರೆಗಳು,*** ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾಲಯ. |
| ತಿಪ್ಪೇಸ್ವಾಮಿ. ಹೆಚ್. | ೧೯೯೭ | ***ಕರ್ನಾಟಕ ಸಾಂಸ್ಕೃತಿ ಸಮೀಕ್ಷೆ,*** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು. |

## ಇಂಗ್ಲೀಷ್ ಪುಸ್ತಕಗಳು


| | | |
|---|---|---|
| Desai. P.B. | 1970 | History of Karnataka, Kannada Rearch Institute of Karnataka University, Darwad |
| Prasanna Kumar Acharya | 1994 | Encyclopedia of Hindu Arachtecture vol.1.2 Kormo publication, New Delhi. |
| Parguson Jems | 1996 | Architecture in Karnataka, Mysore. |
| Rajashekar. N. | 1991 | Rastrakuta art in Karnataka Sujatha Publication, Dharwad. |
| Srineevas. K.R. | 1972 | Temples of South India National Book Frust of India, New Delhi. |
| B.R. Gopal | 1990 | Vijayanagar Incriptions. Vol-III Director of Archcology and Museums, Govt. of Karnataka, Mysore. |

# ಶಾಸನ ಸಂಪುಟಗಳು.

Annual Reports of south India Epigraphy – 1940

Annual Reports of South India Epigraphy – 1952

Ephigraphy of Karnataka – 13

Karnataka Inscriptions

South India insuriptions.

Ephigrophy of Karnataka. Vol. 12 – 16.

EC – Vol. XI, Vol-11 1987, Mysore Gegetcar.

EC – Vol. XII, BL Rice collections.

# ವಕ್ತೃಗಳ ವಿವರ

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧ | ರಂಗಧಾಮಯ್ಯ.ಆರ್ | ೩೭ | ಶಿಕ್ಷಕರು | ಅಹೋಬಲ ಅಗ್ರಹಾರ |
| ೨ | ಬಸವಯ್ಯ | ೭೫ | ವ್ಯವಸಾಯ | ಹರಿಯಪ್ಪನಹಳ್ಳಿ |
| ೩ | ಪ್ರಭುಸ್ವಾಮಿ | ೨೮ | ವಿದ್ಯಾಭ್ಯಾಸ | ಕಾಟೇನಹಳ್ಳಿ |
| ೪ | ಚಂದ್ರಪ್ಪ | ೫೦ | ಶಿಕ್ಷಕರು | ಕಂಚೇನಹಳ್ಳಿ |
| ೫ | ಚಂದ್ರಶೇಖರ್.ಕೆ. ಎಂ | ೬೦ | ಎ.ಪಿ.ಎಂ.ಸಿ. ಅಧ್ಯಕ್ಷರು | ಕೆಸ್ತೂರು |
| ೬ | ಗಂಗಯ್ಯ | ೭೦ | ವ್ಯವಸಾಯ | ಅಜ್ಜಗೊಂಡನ ಹಳ್ಳಿ |
| ೭ | ರುದ್ರಪ್ಪ | ೭೫ | ವ್ಯವಸಾಯ | ಕೆಂಪನ ದೊಡ್ಡೇರಿ |
| ೮ | ಪೋಸ್ಟ್‌ಮುತ್ತಣ್ಣ | ೮೦ | ನಿವೃತ್ತ ಪೋಸ್ಟ್ ಮಾಸ್ಟರ್ | ಕೋರಾ |
| ೯ | ನಂಜೇಗೌಡ | ೪೫ | ವ್ಯವಸಾಯ | ಕೋರಾ |
| ೧೦ | ಶಿವಮ್ಮ | ೮೫ | ವ್ಯವಸಾಯ | ಮೆಳೇಹಳ್ಳಿ |
| ೧೧ | ಬಸವರಾಜು | ೪೦ | ವ್ಯಾಪಾರ | ಚಿಕ್ಕತೊಟ್ಲುಕೆರೆ |
| ೧೨ | ವಿಶಾಲಾಕ್ಷಿ | ೩೦ | ವ್ಯವಸಾಯ | ಹರಿಯಪ್ಪನಹಳ್ಳಿ |
| ೧೩ | ಆನಂದ ಶಾಸ್ತ್ರಿ | ೪೬ | ಶಾಸ್ತ್ರಿಗಳು | ಅನ್ನದಾನ ಶಾಸ್ತ್ರಿ ಪಾಳ್ಯ |
| ೧೪ | ಚಂದ್ರಶೇಖರಯ್ಯ | ೪೮ | ವ್ಯಾಪಾರ | ಜಕ್ಕೇನಹಳ್ಳಿ |
| ೧೫ | ಚಿಕ್ಕರಾಮಯ್ಯ.ಎಂ.ಎ | ೫೦ | ಶಿಕ್ಷಕರು | ಮಸಣಿಪಾಳ್ಯ |
| ೧೬ | ನಂಜಪ್ಪ | ೫೨ | ನಿವೃತ್ತ ಶಿಕ್ಷಕರು | ಮುದ್ದೇನಹಳ್ಳಿ |
| ೧೭ | ಭೀಮರಾವ್ | ೬೫ | ಅರ್ಚಕರು | ಗೊಲ್ಲಹಳ್ಳಿ |
| ೧೮ | ವೆಂಕಟಪ್ಪ ಮಾಸ್ಟರ್ | ೭೦ | ನಿವೃತ್ತ ಶಿಕ್ಷಕರು | ಹನುಮಂತಗಿರಿ |
| ೧೯ | ನಾರಾಯಣಪ್ಪ | ೬೯ | ವ್ಯವಸಾಯ | ಅಹೋಬಲ ಅಗ್ರಹಾರ |
| ೨೦ | ರಂಗಯ್ಯ | ೬೦ | ವ್ಯವಸಾಯ | ಚಿನಗ |
| ೨೧ | ಹನುಮಂತಯ್ಯ (ದೊರೆ) | ೭೦ | ವ್ಯವಸಾಯ | ನಿಂಗಾಪುರ |
| ೨೨ | ಕೆ.ಎನ್.ಸಿದ್ದರಾಜು | ೪೦ | ಕಲೆಶಿಕ್ಷಕರು | ಕೆಸ್ತೂರು |
| ೨೩ | ರಾಜು | ೩೦ | ವ್ಯವಸಾಯ | ಹಿರೇಗುಂಡಗಲ್ |
| ೨೪ | ಎಂ. ಬಿ. ಕುಮಾರಸ್ವಾಮಿ | ೩೯ | ಶಿಕ್ಷಕರು | ಮಾವುಕೆರೆ |
| ೨೫ | ಜಿ.ಎಸ್. ರೂಪ | ೨೯ | ವ್ಯವಹಾರ | ಮಾವುಕೆರೆ |



ಕೆಸ್ತೂರಿನ ವೀರಭದ್ರೇಶ್ವರ ದೇವಾಲಯದ ಮುಖ ಮಂಟಪ



ಹನುಮಂತಗಿರಿಯಲ್ಲಿರುವ ಆಂಜನೇಯನ ಉಬ್ಬುಶಿಲ್ಪ



ಕೆಸ್ತೂರಿನ ವೀರಭದ್ರ ದೇವಾಲಯದ ಲ್ಲಿರುವ ಸಪ್ತಸ್ವರ ಕಂಭ



ಕೋರಾದ ಅರಸು ಮನೆಯಲ್ಲಿರುವ “ರಾಯರೇಖೆ” ಎಂಬ ಹಸ್ತ ಪ್ರತಿ



ಕೋರಾದಲ್ಲಿ  ಇರುವ ವೀರ ಮಾಸ್ತಿಗುಡಿ



ಕೋರಾದಲ್ಲಿ ದೊರೆತಿರುವ ವೀರ ಗಲ್ಲು



ವೀರಭದ್ರ ಮೂರ್ತಿ ಶಿಲ್ಪ



ಗಂಗರ ಕಾಲದ ಶ್ರೀ ಆದಿದೇವತೆ, ಶ್ರೀ ದುರ್ಗಾ ದೇವಿ
ಹಾಗೂ
ಖಡ್ಗವನ್ನು ಹಿಡಿದಿರುವ ಶ್ರೀ ವಿನಾಯಕ ಮೂರ್ತಿ ಶಿಲ್ಪಗಳು



ವೀರಭದ್ರೇಶ್ವರ ದೇವಾಲಯದಲ್ಲಿರುವ ಜೋಡಿ ನಂದಿ ಶಿಲ್ಪಗಳು



ದ್ವಾರಪಾಲಕ ಚಿಕ್ಕೀರಣ್ಣನ ಶಿಲ್ಪ



ದ್ವಾರಪಾಲಕ ದೊಡ್ಡೀರಣ್ಣನ ಶಿಲ್ಪ



ಹಿರೇಗುಂಡಗಲ್ಲಿನ ದಾನಶಾಸನ



ದೇವಲಾಪುರದ ಊರ
ಹೊರವಲಯದಲ್ಲಿರುವ ವೀರಗಲ್ಲು



ದೇವಲಾಪುರದಲ್ಲಿ ದೊರೆತಿರುವ
ವೈಷ್ಣವಮೂರ್ತಿ ಶಿಲ್ಪ



ವೀರಭದ್ರ ದೇವಾಲಯದ ಮುಖ್ಯ ದ್ವಾರದ ಚಿತ್ರಕಲೆ
ಹಾಗೂ ಸ್ಥಂಭದ ಚಿತ್ರಣ



ಕೆಸ್ತೂರಿನ ವೀರಭದ್ರ ದೇವಾಲಯದ ದ್ರಾವಿಡಶೈಲಿಯ ಗೋಪುರ



ಚಿನಗದ ಮೆಗಾಲಿಥಿಕ್ ಸಂಸ್ಕೃತಿಯ ಸಮಾಧಿ



ವೀರಭದ್ರೇಶ್ವರ ದೇವಾಲಯದ ಭಿತ್ತಿಯ ಮೇಲಿರುವ ಮೂರ್ತಿ ಶಿಲ್ಪ



ವೀರಭದ್ರೇಶ್ವರ ದೇವಾಲಯದಲ್ಲಿರುವ ನೃತ್ಯ ಶಿಲ್ಪ



ದೇವಲಾಪುರದಲ್ಲಿ ಭಗ್ನಗೊಂಡಿರುವ ನಂದಿ ಶಿಲ್ಪ



ನೃತ್ಯ ಭಂಗಿಯಲ್ಲಿರುವ ನಟರಾಜ ಶಿಲ್ಪ



ಹಿರೇಗುಂಡಗಲ್ಲಿನ ವೀರಗಲ್ಲು

